# ವಿಜಯೋತ್ಸವ

(ಭಾಗ ೧)



ತ. ರಾ. ಸು






ಅಶೋಕ ಸಾಹಿತ್ಯ
ಬೆಂಗಳೂರು-೧

ಮೊದಲನೆಯ ಮುದ್ರಣ: ಸೆಪ್ಟೆಂಬರ್ ೧೯೫೯





ಬೆಲೆ: ರೂ. ೧.೭೫ ನ.ಪೈ.



ಮಾರಾಟದ ಪೂರ್ಣ ಹಕ್ಕುದಾರರು:

**ದಿ ಸ್ಟ್ಯಾಂಡರ್ಡ್ ಬುಕ್ ಡಿಪೋ**

ಅವಿನ್ಯೂ ರೋಡ್ : : ಬೆಂಗಳೂರು-೨

ಮುದ್ರಕರು:

ಎಂ. ಎಸ್. ಚಿಂತಾಮಣಿ, ಬಿ. ಎಸ್ಸಿ.,

ದಿ ಈಸ್ಟರ್ನ್ ಪ್ರೆಸ್

೧೧-ಎ ಜಯಚಾಮರಾಜ ರೋಡ್, ಬೆಂಗಳೂರು-೨

# ಮುನ್ನುಡಿ

ಬಹುದಿನಗಳ ಹಿಂದೆಯೇ ಬರಬೇಕಾದ ‘ವಿಜಯೋತ್ಸವ’ದ ರಡನೆಯ ಅಂದರೆ ಮುಕ್ತಾಯ ಭಾಗವನ್ನು ಈ ದಿನ ಕನ್ನಡ ವಾಚಕರ ಯಲ್ಲಿಡಲು ನನಗೆ ಸಂತೋಷವೆನಿಸುತ್ತಿದೆ.

ನನ್ನಿಂದ ರಚಿಸಲ್ಪಟ್ಟ ಚಿತ್ರದುರ್ಗದ ಇತಿಹಾಸದ ಆಧಾರದ ಮೇಲೆ ಚಿತವಾದ ಇತರ ಕಾದಂಬರಿಗಳಂತೆಯೇ ಈ ಭಾಗವೂ ವಾಚಕರಿಗೆ ಂತೋಷವನ್ನು ಕೊಡುವುದೆಂದು ನಂಬುತ್ತೇನೆ.

ಈ ಭಾಗವನ್ನು ಪ್ರಕಟಿಸುವಾಗ ನನ್ನಿಂದ ಆದ ನಿಧಾನವನ್ನು ಸಹಿಸಿ ೊಂಡು, ಹೊರಗೆ ತರುವ ಬೆಂಗಳೂರಿನ ಅಶೋಕ ಸಾಹಿತ್ಯ ಪ್ರಕಾಶನದ ॥ ಶ್ರೀ ಜಿ. ವಿ. ವೆಂಕಣ್ಣನವರಿಗೂ, ಇದಕ್ಕೆ ಸುಂದರವಾದ ಮುಖಚಿತ್ರ ನ್ನು ರಚಿಸಿರುವ ಕಲಾವಿದ ಮಿತ್ರ ಶ್ರೀ ಎಸ್. ಎಲ್. ನಾರಾಯಣ್ ವರಿಗೂ, ಮತ್ತು ಅಂದವಾಗಿ ಮುದ್ರಿಸಿರುವ ಈಸ್ಟರ್ನ್ ಪ್ರೆಸ್ಸಿನ ್ರೀ ಎಂ. ಎಸ್. ಚಿಂತಾಮಣಿಯವರಿಗೂ ನನ್ನ ನೆನಕೆಗಳು.

೧೬–೯–೧೯೫೯
ಕಾ’ – ಯಾದವಗಿರಿ

ತ. ರಾ. ಸು

# ಮೆಹರ್‌ಬಾನು ಬಯಸಿದ ಉಡುಗೊರೆ

೧

"ಕಳುಹಿಸಿ, ಆವನನ್ನು ಈ ಸಭೆ ಬಿಟ್ಟು ಕಳುಹಿಸಿ. ಅವನಿಲ್ಲಿದ್ದರೆ ನಾನು ಹಾಡಲಾರೆ."

ಅದುವರೆಗೂ, ಕಿವಿಯಲ್ಲಿ ಗಾನಸುಧೆಯ ಜೇನು ಕರೆಯುತ್ತಿದ್ದ ಕರ್ಣಾನಂದಕರವಾದ ಧ್ವನಿ ಇದ್ದಕ್ಕಿದ್ದ ಹಾಗೇ ಕಠೋರವಾಗಿ, ಆಸ್ಫೋಟನವಾದ ಜ್ವಾಲಾಮುಖಿಯಂತೆ ಫೂತ್ಕರಿಸಿ, ನುಡಿದಿತ್ತು.

ಹೃದಯವನ್ನು ಇರಿಯಲು ಎತ್ತಿದ ಸುರಿಗೆಯಂತೆ, ಅವಳ ಕೈಬೆರಳು ಆವನತ್ತ ಹಾಯ್ದಿತ್ತು.

ಕೆಲವೇ ಗಳಿಗೆಗಳ ಹಿಂದೆ, ರಾಗಸುಧಾರಸದ ಅಮಲಿನಿಂದ ಭಾರವಾದ [illegible]ತ್ರಗಳು, ಆವನತ್ತ ತಿರುಗಿದಾಗ, ಇದ್ದಕ್ಕಿದ್ದ ಹಾಗೇ ಬೆಂಕಿಯ [illegible]ವು.

[illegible] ಕೈಬೆರಳು, ಚಮ್ಮಟಿಗೆಯ ಝಳಪಿನಂಥ ಆ ಮಾತುಗಳು—

ಹೊಗೆಯಿಟ್ಟು ಹೊರಗಟ್ಟಲ್ಪಟ್ಟ ಮೂಕ ಪಶುವಿನಂತೆ, ಅರಮನೆಯಿಂದ ಹೊರಬಿದ್ದ ಬಳಿಕಲೂ—

ಆ ಕಣ್ಣು, ಆ ಕೈಬೆರಳು, ಚಮ್ಮಟಿಗೆಯ ಝಳಪಿನಂತೆ ಆ ಮಾತುಗಳು—

ಜರ್ಾ ಡ್ರ್ಯೂರೋನ ಬೆನ್ನಟ್ಟಿದ್ದವು.

ಅವನ ಕಣ್ಣುಗಳಿಂದ, ತಡೆಯಲಸಾಧ್ಯವಾದ ಕಂಬನಿ ಧಾರೆಗಟ್ಟಿ ಹರಿಯುತ್ತಿತ್ತು; ಅವನ ಹೃದಯದಲ್ಲಿ ಪ್ರಕ್ಷುಬ್ಧ ಶೋಕ ಉರಿಗೆದರಿತ್ತು;

ಶೋಕ - ಗತಕಾಲದ ನೆನಪುಗಳ ಆಜ್ಯಾಹುತಿಯನ್ನುಂಡು ಉಗ್ರ ದಾವಾನುಲವಾದ ಶೋಕ—

ಆ ಶೋಕದೊಂದಿಗೆ ಮಾಡಬಾರದುದನ್ನು ಮಾಡಿದುದಕ್ಕಾಗಿ, ಅವನೆದೆಯಲ್ಲಿ ತುಂಬಿ ಬಂದು, ಕಿವಿಯಲ್ಲಿ ಭೋರ್ಗರೆಯುತ್ತಿರುವ ನಾಚಿಕೆ—

ಇದಾವುದರ ಭಾರವನ್ನೂ ಭರಿಸಲಾಗದೆ ತತ್ತರಿಸುತ್ತ, ಅರಮನೆಯಿಂದ ಹೊರಬಂದ ಜರ್ಾ, ಅರಮನೆಯ ಮಹಾದ್ವಾರವನ್ನು ದಾಟಿ, ಎತ್ತಕಡೆ ಹೋಗಬೇಕೆಂಬುದೂ ಅರಿವಾಗದಂತೆ, ಅನಿಶ್ಚಯತೆಯಿಂದ ಒಂದು ಗಳಿಗೆ, ಅರಮನೆಯ ಮುಂದೆ ನಿಂತ.

ಎಲ್ಲಿಗೆ ಹೋಗುವುದು, ಏನು ಮಾಡುವುದು ?

ಆ ಯೋಚನೆಯಲ್ಲೇ ಸುತ್ತಲೂ ಕಣ್ಣು ಹಾಯಿಸಿ ನೋಡಿದ.

ಅವನ ಮನಸ್ಸನ್ನು ಆವರಿಸಿದ ಮಬ್ಬೇ ಮುಗಿಲನ್ನು ಆವರಿಸಿದಂತೆ, ಮುಗಿಲಿನಲ್ಲೂ ಮೋಡ ಕಟ್ಟಿ, ಮಬ್ಬಾದ ಬೆಳದಿಂಗಳ ಬೆಳಕಿನಲ್ಲಿ, ಸುತ್ತಲೂ ಹಬ್ಬಿದ ಗಿರಿಮಾಲೆ, ಆಗಸದಿಂದ ನೆಲದ ಮೇಲೆ ಜಾರಿಬಿದ್ದ ಮೋಡದ ಖಂಡಗಳಂತೆ ಕಾಣುತ್ತಿದ್ದವು. ಬೆಳದಿಂಗಳೂ ತನ್ನ ಕಾಂತಿಯನ್ನು ಕಳೆದುಕೊಂಡು, ಆಕಾಶ ನೆಲದ ಮೇಲೆ ಬೂದಿಯನ್ನು ಚೆಲ್ಲುತ್ತಿರುವುದೇನೋ ಎಂಬಂತಿತ್ತು. ಆಕಾಶದಲ್ಲಿ ಮೋಡ ಕವಿದಿದ್ದುದರಿಂದ, ಆ ಎತ್ತರ ಪ್ರದೇಶದಲ್ಲಿ ಸುಳಿವ ತಂಗಾಳಿಗೂ ಚೈತನ್ಯ ಉಡುಗಿಹೋದಂತೆ, ನಭದಲ್ಲಿಯ ನಕ್ಷತ್ರ ಕಾಂತಿಯಂತೆ—ಅದೂ ಮಂಕಾಗಿತ್ತು.

ಜಗತ್ತನ್ನೇ ವ್ಯಾಪಿಸಿದ ಆ ಮಂಕುತನ—

ಅದರ ಜೊತೆ ಜೊತೆಯಾಗಿ ಹಬ್ಬಿದ ನೀರವತೆ—

ಆ ನಿಸ್ತೇಜ ನೀರವತೆಯ ಪ್ರತಿನಿಧಿಗಳಂತೆ ಎದ್ದುನಿಂತ ಮಲೆಯ ಕೋಡು, ಬತೇರಿಗಳು—

ಮೌನವಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿದ್ದ ಅರಮನೆಯ ಕಾವಲು ಪಡೆ—

ಸುತ್ತಮುತ್ತಲೂ ತನ್ನನ್ನು ನುಂಗಲೆಳಸಿ, ಮೇಲ್ವಾಯ್ದು ಬರುವ ನಿಸ್ತೇಜ

ನೀರವತೆಯ ಕಡಲಿನಲ್ಲಿ, ಹಡಗೊಡೆದು ಸಿಲುಕಿದ ಏಕಾಕಿ ಯಾತ್ರಿಕನಂತೆ ನಿಂತಿದ್ದ ಜಾರ್ಜ್ ಡ್ಯೂವೋರೋ.

ಕೆಲವು ಗಳಿಗೆಗಳ ಕಾಲ ಹಾಗೆ ನಿಂತ ಬಳಿಕ, ಅವನಿಗೆ ಹಾಗೆ ನಿಂತಿರುವುದೂ ದುರ್ಭರವಾಗಿ, ಎತ್ತ ಹೋಗುತ್ತಿರುವೆ, ಏನು ಮಾಡುತ್ತಿರುವೆ ಎಂಬುದರ ಅರಿವೇ ಇಲ್ಲದವನಂತೆ, ತಟಕ್ಕನೆ ಎಡಪಾರ್ಶ್ವಕ್ಕೆ ತಿರುಗಿ, ಅರಮನೆಯ ಪಶ್ಚಿಮ ದಿಗ್ಭಾಗದಲ್ಲಿದ್ದ ಶೃಂಗಾರವನದತ್ತ ಕಾಲು ಹಾಕಿದ.

ಅರಮನೆಗಿಂತಲೂ, ಹತ್ತಿಪ್ಪತ್ತು ಅಡಿಗಳಷ್ಟು ಕೆಳಭಾಗದಲ್ಲಿದ್ದ ಶೃಂಗಾರವನಕ್ಕೆ ಹೋಗುವ ಮೆಟ್ಟಲುಗಳನ್ನಿಳಿದು, ಶೃಂಗಾರವನದ ದ್ವಾರವನ್ನು ತಲುಪಿ, ಅಲ್ಲಿಯ ಕಾವಲುಗಾರ ಅವನನ್ನು ತಡೆದು—

"ಇಲ್ಲಿ ಯಾರಿಗೂ ಪ್ರವೇಶಿಸಲು ಅಪ್ಪಣೆಯಿಲ್ಲ."

—ಎಂದು ಹೇಳುವವರೆಗೂ ಅವನಿಗೆ ತಾನೆತ್ತ ಹೋಗುತ್ತಿರುವೆನೆಂಬುದರ ಅರಿವಿರಲಿಲ್ಲ.

ಎಂತಲೇ ಕಾವಲುಗಾರ ಅವನನ್ನು ತಡೆದಾಗ ಚಕಿತನಾಗಿ—

"ಏಕೆ ?"

—ಎಂದು ಕೇಳಿದ.

"ಇದು ಅಂತಃಪುರದ ಸ್ತ್ರೀಯರಿಗೆ ಮೀಸಲಾದದ್ದು; ಅರಮನೆಯವರಿಗಲ್ಲದೆ ಉಳಿದವರಿಗೆ ಇಲ್ಲಿ ಪ್ರವೇಶವಿಲ್ಲ."

—ಎಂದ ಕಾವಲುಗಾರ.

ಅವನಾಡಿದ ಮಾತು ಜಾರ್ಜ್‌ಗೆ ಅರ್ಥವಾಗಲಿಲ್ಲ. ಅವನ ಮಾತನ್ನು ಅರ್ಥ ಮಾಡಿಕೊಳ್ಳುವಷ್ಟು ತಾಳ್ಮೆಯೂ ಜಾರ್ಜ್‌ಗೆ ಇರಲಿಲ್ಲ.

"ಹಟಾವೋ ಮತ್" (ತಡೆಯಬೇಡ)

—ಎಂದು ಗದ್ದರಿಸಿ, ಅಡ್ಡವಾದ ಕಾವಲುಗಾರನನ್ನು ಒಂದು ಪಕ್ಕಕ್ಕೆ ತಳ್ಳಿ, ತೆರೆದ ಬಾಗಿಲನ್ನು ದಾಟಿಕೊಂಡು ಶೃಂಗಾರವನವನ್ನು ಪ್ರವೇಶಿಸಿದ.

ಜಾನ್ ಯಾರು, ಎಲ್ಲಿಯವನು ಎಂದು ತಿಳಿಯದಿದ್ದರೂ ಕಾವಲುಗಾರನಿಗೆ, ಅವನು ದೊರೆಗಳ ಕೃಪೆಗೆ ಪಾತ್ರನಾದವನು ಎಂಬುದಷ್ಟು ತಿಳಿದಿದ್ದುದರಿಂದ ಆ ಹೊತ್ತಿನಲ್ಲಿ ಉದ್ಯಾನದಲ್ಲಿ ಅರಮನೆಯ ಹೆಂಗಳೆಯರು ಯಾರೂ ಇಲ್ಲವೆಂದು ಗೊತ್ತಿದ್ದುದರಿಂದ, ಅವನನ್ನು ತಡೆದು ತಲೆಗೆ ಎರವಾಗುವುದೇಕೆ ಎಂಬ ಭಯದಿಂದ ಸುಮ್ಮನಾದ.

ಶೃಂಗಾರವನವನ್ನು ಪ್ರವೇಶಿಸಿದ ಬಳಿಕ ಜಾರ್ಗೆ ಹೊಸದೊಂದು ಲೋಕವನ್ನೇ ಪ್ರವೇಶಿಸಿದಂತಾಯಿತು.

ಎತ್ತರವಾಗಿ, ದಟ್ಟವಾಗಿ ಬೆಳೆದ ಫಲ-ಪುಷ್ಪವೃಕ್ಷಗಳ ಅಡಿಯ ತಂಪು ಗತ್ತಲೆಯಲ್ಲಿ, ಸಂಜೆ ಅರಳಿದ ಬಗೆಬಗೆಯ ಹೂಗಳಿಂದ ಸುವಾಸಿತವಾದ ತಂಗಾಳಿಯನ್ನು ಸವಿಯುತ್ತಾ, ಅಲ್ಲಲ್ಲಿ ಮರದ ಎಲೆಗಳ ಸಂದಿನಿಂದ ನುಸಳಿ ಬಂದು, ಹಸಿರು ಹುಲ್ಲಿನ ಮೇಲೆ ಮಲಗಿದ ಚಂದ್ರಕಿರಣಗಳು ರಚಿಸಿದ ಚಿತ್ರವನ್ನು ಕಾಣುತ್ತಾ, ಕಾರಂಜಿಗಳ ಜುಳು ಜುಳು ಸದ್ದನ್ನು ಕೇಳುತ್ತಾ ನಡೆಯುತ್ತಿದ್ದಾಗ, ಜಾರ್ಗೆ, ಚಿರಬೇಸಿಗೆಯ ಉಷ್ಣವಲಯವನ್ನು ದಾಟಿ, ಸಮಶೀತೋಷ್ಣವಲಯವನ್ನು ಪ್ರವೇಶಿಸಿದಂತಾಯಿತು. ಆ ಬನದ ತಂಪು ಅವನ ಮನದ ಉದ್ವೇಗವನ್ನು ಕಡಿಮೆ ಮಾಡಿ. ಹೃದಯದ ಉಮ್ಮಳ ಕೊಂಚ ಕಡಮೆಯಾದಂತೆ ತೋರಿ, ಹಾಗೇ ಮುಂದೆ ನಡೆದು, ಗೋಪಾಲಸ್ವಾಮಿಯ ಹೊಂಡದ ಬಳಿ ಸೇರಿ, ಹೊಂಡದ ಬಳಿಯಲ್ಲಿದ್ದ ಬಹು ವಿಶಾಲವಾದ ಹಾಸುಬಂಡೆಯ ಮೇಲೆ ಉರುಳಿಕೊಂಡು, ಮೋಡ ಚದರಿ ಕ್ಷಣಕ್ಷಣಕ್ಕೆ ಉಜ್ವಲವಾಗುತ್ತಿದ್ದ ಚಂದ್ರಕಾಂತಿಯಿಂದ ಹೊಳಪೇರುತ್ತಿದ್ದ ನೀಲನಭವನ್ನು ನೋಡುತ್ತಾ ಹಾಗೇ ಕಣ್ಣು ಮುಚ್ಚಿದ.

ಅವನ ಮೈಯು ಕಣ್ಣು ಮುಚ್ಚುವದನ್ನೇ ಕಾದಿದ್ದಂತೆ, ಅವನ ಬಗೆಗಣ್ಣು ಬಿಚ್ಚಿ, ಗತಕಾಲದ ಗರ್ಭದಲ್ಲಿ ಹುದುಗಿದ ನೆನಪುಗಳನ್ನು ಕಾಣತೊಡಗಿತು.

ಹೊಂಡದ ನೀರಿನ ಹರಹಿನ ಮೇಲೆ ಬೀಸಿ ಬಂದ ತಂಗಾಳಿ, ಹೆಪ್ಪುಗಟ್ಟಿದ ನೆನಪನ್ನು ಎಳೆಎಳೆಯಾಗಿ ಬಿಡಿಸಿ ಅರಳಿಸಿತು.

ನೆನಪುಗಳು—

ಮೆಹರ್‌ಬಾನುವಿನ ಮುಖ ಕೆರಳಿಸಿ, ಬೆಳದಿಂಗಳಲ್ಲಿ ತೊಯ್ದು ತಂಗಾಳಿ ಅರಳಿಸಿದ ನೆನಪುಗಳು—

ನೆನಪು—

ಮಾರ್ಸೇಲ್ಸಿನ ಕಡಲು ದಂಡೆಯಮೇಲೆ ಕುಳಿತು, ಬಂದರಿನಲ್ಲಿ ಕಿಕ್ಕಿರಿದ ಬಗೆಬಗೆಯ ದೋಣಿಗಳನ್ನು ನೋಡುತ್ತ, ಆ ದೋಣಿಗಳ ಬಿಳಿಯ ಬಣ್ಣದ ಹಾಯಿಪಟ ಹಡೆದ ಮರಿಗಳೇನೊ ಎಂಬಂತೆ, ನೀಲಮುಗಿಲಿನಲ್ಲಿ ವಿಹರಿಸುವ ಶುಭ್ರ ಶ್ವೇತವರ್ಣದ ನೀರ್ವಕ್ಕಿಗಳ ದಂಡನ್ನು ನೋಡುತ್ತಾ—

ಮಿರುಗಿಟ್ಟ ತಾಮ್ರ ವರ್ಣದ ಕೇಶರಾಶಿಯ, ನೀಲನೇತ್ರ, ಗುಲಾಬಿ ಬಣ್ಣದ ತುಟಿಯ, ಅಮೃತಾಶಿಲಾವಿಗ್ರಹದಂತಿದ್ದ ರೊಸಿಟಾಳನ್ನು ಬಿಗಿದಪ್ಪಿ ಚುಂಬಿಸಿದ ನೆನಪು ;

ಅವಳನ್ನು ತನ್ನ ತೊಳತೆಕ್ಕೆಯಲ್ಲಿ ಒರಗಿಸಿಕೊಂಡು, ತನ್ನ ಬಾಳ ಕನಸುಗಳನ್ನು ಅವಳಿಗೆ ಬಣ್ಣಿಸುತ್ತ, ತನ್ನ ಕನಸು ಸತ್ಯವಾಗುವುದೊ ಇಲ್ಲವೋ ಎಂದು ಅವಳು ಸಂದೇಹಿಸಿದಾಗ, ತನ್ನ ಕನಸಿಗೆ ದೈವೀ ಸಂಕಲ್ಪದ ಬೆಂಬಲವಿದೆ ಎಂಬುದನ್ನು ಸಾಧಿಸಿ ತೊರಿಸುವ ಸಲುವಾಗಿ, ಕಾಗದದ ದೋಣಿಯನ್ನು ಮಾಡಿ, ಕಡಲ ಅಲೆಯಲ್ಲಿ ಅದನ್ನು ತೇಲಿಬಿಟ್ಟ—

"ನೋಡು ರೊಸಿ, ಇದು ಮುಳುಗಿತೊ, ನನ್ನ ಕನಸು ಸುಳ್ಳು ; ಇದು ತೇಲುತ್ತಲೇ ಹೋಯಿತೋ—ಅದೇ ನನ್ನ ಕನಸು ನನಸಾಗುತ್ತದೆ ಎಂಬುದಕ್ಕೆ ದೃಷ್ಟಾಂತ"

—ಎಂದು ಅವಳೊಂದಿಗೆ ಪಂಥ ಹೂಡಿದ ನೆನಪು ;

ಆ ಕಾಗದದ ದೋಣಿ, ಸಾಗರದ ಬೆಟ್ಟ ಅಲೆಗಳೊಂದಿಗೆ ಸ್ಪರ್ಧಿಸಲಾಗದೆ ಮುರಿದಾಗ, ತನಗಿಂತಲೂ ಹೆಚ್ಚಾಗಿ ಅವಳು ವ್ಯಥಿತಳಾಗಿ, ಕಂಬನಿಗರೆದು—

"ಜಾರ್ಜ್, ಜಾರ್ಜ್, ಸ್ಪರ್ಧೆ ಹೂಡುವ ಹುಚ್ಚೇಕೆ ಹಿಡಿಯಿತು ನಿನಗೆ? ಈ ಶಕುನವನ್ನು ನಂಬಬೇಡ. ನಿನ್ನ ಸಂಕಲ್ಪ ಕಾಗದದ ದೋಣಿಯಲ್ಲ, ಪ್ರಕ್ಷುಬ್ಧ ಸಾಗರವನ್ನೂ ಮಣಿಸಿ ಗೆಲ್ಲಬಲ್ಲ ವಜ್ರನಾವೆ ಜಾರ್ಜ್!"

—ಎಂದು ಅವನನ್ನು ಬಿಗಿದಪ್ಪಿ ಸಂತೈಸಿದ ನೆನಪು ;

"ಎಲ್ಲಿ ರೋಸಿ ನೊಡೊಣ ನಿನ್ನ ಕತ್ತಿನಲ್ಲಿರುವ ಶಿಲುಬೆ ಮರದ್ದೋ, ಲೋಹದ್ದೋ ?"

—ಎಂದು ಆ ಶಿಲುಬೆಯನ್ನು ಪರೀಕ್ಷಿಸುವ ನೆಪಮಾಡಿಕೊಂಡು, ಅವಳ ಧೃಢ ವಕ್ಷಸ್ಥಲದ ಮೇಲೆ ಕೈಯಾಡಿಸಿದ ನೆನಪು ;

ಹಾಗೆ ತುಂಟಾಟ ಮಾಡಿದಾಗ ಕೆಂಪೇರಿದ ಮೊಗದ ಹೊಳಪಾದ ಕಣ್ಣುಗಳ, ಮೃದು ಮಂದಹಾಸೊಜ್ವಲವಾದ ಅವಳ ಬಿಂಬಾಧರಗಳ ನೆನಪು ;

ವಿವಾಹ ಬಾಹಿರವಾದ ಕಾಮಜೀವನಕ್ಕೆ ತಲೆಬಾಗಲು ಒಪ್ಪದೆ ಆದರೂ ಬಿರುಗಾಳಿ ಕಲಕಿದ ಕಡಲಿನಂತೆ ಮೊರೆದು ಬಂದ ಮೋಹವನ್ನು ಭರಿಸಲಾಗದೆ, ಇಬ್ಬದಿಯ ಹೊಯ್ದಾಟದಲ್ಲಿ ಗದಗದ ನಡುಗುತ್ತಾ—

"ಜಾರ್ಜ್, ಜಾರ್ಜ್, ಜಾರ್ಜ್, ನೀನು ನನ್ನ ನಲ್ಲ, ನೀನೇ ನನ್ನ ದೇವರು,

ನಿನ್ನ ಒಲವೇ ನನ್ನ ಧರ್ಮಗುರು"

—ಎನ್ನುತ್ತ ಅವನ ಉದ್ರಿಕ್ತ ಕಾಮಕ್ಕೆ ಇಂಥದೇ ಚಂದ್ರಿಕಾ ರಂಜಿತ ಮಧುರಾತ್ರಿಯಲ್ಲಿ ತನಗೆ ತನ್ನ ಮೈಯನ್ನೊಪ್ಪಿಸಿದ ಮುಗ್ಧ ಮನೋಹರ ರೋಸಿಯ ನೆನಪು;

ಬೆಳದಿಂಗಳಿನಂಥ ಆ ನೆನಪು—

ಪಾದ್ರಿಯ ಕ್ರೋಧಕ್ಕೆ ಬೆದರಿ, ಪಿರನೀಸ್ ಪರ್ವತಗಳ ಕಣಿವೆಯನ್ನು ಕಳ್ಳನಂತೆ ದಾಟಿ, ಪೋರ್ಚುಗಲ್ಲನ್ನು ಪ್ರವೇಶಿಸಿ, ಹಿಂದೂಸ್ಥಾನಕ್ಕೆ ಹೋಗುವ ಹಡಗೊಂದರಲ್ಲಿ ಕೆಲಸಗಾರನಾಗಿ ಸೇರಿದ ಬಳಿಕ, ಅವನ ಬೆನ್ನಟ್ಟಿ ಬಂದ ಘೋರವಾರ್ತೆ—

ರೊಸಿಟಾ ಸೈತಾನನೊಂದಿಗೆ ಕಾಮಜೀವನ ನಡೆಸಿ,ಗರ್ಭಿಣಿಯಾದಳೆಂಬ ಆಪಾದನೆಯ ಮೇಲೆ ಅವಳನ್ನು ನಾಲ್ಕು ರಾಜವೀಧಿಗಳ ನಡುವಿನ ಚೌಕದಲ್ಲಿ, ಶಿಲುಬೆಗೆ ಬಿಗಿದು, ಸಹಸ್ರಾರು ಜನರ ಸಾಕ್ಷಿಯಾಗಿ ಅವಳನ್ನು, ಪಾದ್ರಿ ಸುಡಿಸಿದನೆಂಬ ಹೃದಯ ವಿದ್ರಾವಕ ವಾರ್ತೆಯನ್ನು ಕೇಳಿದ ಕರಾಳದಿನದ ನೆನಪು—

"ಇಲ್ಲ, ರೊಸಿಟಾ ಇನ್ನಿಲ್ಲ, ನನ್ನ ಪಾಲಿಗಿನ್ನು ಬೆಳದಿಂಗಳಿಲ್ಲ; ಬರೀ ಅಂಧಕಾರಾವೃತ ಕರಾಳ ರಾತ್ರಿಯೊಂದೇ ನನ್ನ ಬಾಳಿನ ನಿತ್ಯ ಸಹಚರಿ ಇನ್ನು ನನ್ನ ಪಾಲಿಗೆ ಹೆಣ್ಣಿಲ್ಲ, ಪ್ರೇಮವಿಲ್ಲ"

—ಎಂದು ಹೇಳಿಕೊಂಡು, ಮತ್ತೆಂದೆಂದೂ ಫ್ರಾನ್ಸಿನ ಉರಿಭೂಮಿಯ ಮೇಲೆ ಕಾಲಿಡಬಾರದೆಂಬ ಶಪಥ ಮಾಡಿ, ಹಿಂದೂಸ್ಥಾನದತ್ತ ಹೊರಟ ನೆನಪು.

* * * *

"ಇನ್ನು ತನ್ನ ಪಾಲಿಗೆ ಹೆಣ್ಣಿಲ್ಲ, ಪ್ರೇಮವಿಲ್ಲ—

"ಇರುವುದೊಂದೇ—ಯಾವ ಮಾನವೀಯ ಭಾವನೆಯೂ ಇಲ್ಲದವನಂತೆ, ಎಲ್ಲಿ ಹಣಗಳಿಸಲು ಅವಕಾಶವಿದ್ದರೆ, ಅಲ್ಲಿ ಹಣಗಳಿಸಬೇಕು; ಸಾಕಷ್ಟು ಹಣಗಳಿಸಿದ ಬಳಿಕ, ಮತ್ತೆ ತನ್ನ ತಾಯ್ನಾಡಿಗೆ ಮರಳಿ, ತನ್ನ ಬಾಳನ್ನು ಮರುಭೂಮಿಯಾಗಿಸಿದ ಪಾದ್ರಿಯ ಮೇಲೆ, ಅವನ ವರ್ಗದ ಮೇಲೆ ಸೇಡು ತೀರಿಸಬೇಕು."

—ಎಂಬ ಉರಿ ಬಯಕೆಯನ್ನು ತನ್ನ ಹೃದಯದಲ್ಲಿ ಹೊತ್ತು ಬಂದ

ಜಾರ್ಜ್, ಭಾರತದ ಸಿರಿ – ಸಂಪತ್ತಿನ ತವರುಮನೆಯಾದ ದೆಹಲಿಗೆ ಬಂದು, ಮೊಗಲ್ ಬಾದಷಹ ಔರಂಗಜೇಬನ ಆಶ್ರಯವನ್ನು ಸಂಪಾದಿಸಿದ್ದ.

ಮೊಗಲ ಸೇನೆಯನ್ನು ಸೇರಿ, ಅದು ಮರಾಟರ ಮೇಲೆ, ರಜಪೂತರ ಮೇಲೆ ಮಾಡಿದ ದಾಳಿಗಳಲ್ಲೆಲ್ಲಾ ಭಾಗವಹಿಸಿ, ಆ ಸೇನೆಯೊಂದಿಗೇ ದಕ್ಷಿಣ ಭಾರತಕ್ಕೆ ಬಂದಿದ್ದ. ಮೊಗಲರ ಸೇನೆ, ದಕ್ಷಿಣ ಭಾರತದಲ್ಲಿದ್ದ ಬಿಜಾಪುರದ ಆದಿಲ್‌ಷಾಹಿಯನ್ನು ನಿರ್ಮೂಲ ಮಾಡಿದ ಬಳಿಕ, ಅಖಂಡ ಭಾರತದಲ್ಲಿ ಮೊಗಲ್ ಸಾಮ್ರಾಜ್ಯಷಾಹಿಯೇ ಏಕೈಕ ಪ್ರಭುತ್ವವೆನ್ನಿಸಿಕೊಂಡ ಹೊತ್ತಿನಲ್ಲೇ, ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಇಸ್ಲಾಮಿನ ಹಸಿರು ಪತಾಕೆಯನ್ನು ಮೆರೆಸಿದ ಆತ್ಯುಚ್ಛ್ರಾಯದ ಗಳಿಗೆಯಲ್ಲೇ ಆ ಪ್ರಬಲ ಸಾಮ್ರಾಜ್ಯಶಾಹಿ ಸಿಡಿದೊಡೆಯುವ ಸೂಚನೆಗಳನ್ನು ಕಂಡು, ಆ ಬಳಿಕ ದೇಶಾದ್ಯಂತ ವ್ಯಾಪಿಸಬಹುದಾದ ಅನಾಯಕತೆಯಲ್ಲಿ, ಅಷ್ಟು ವರ್ಷ ತಾನು ಶ್ರಮಪಟ್ಟು ಗಳಿಸಿದುದನ್ನು ಕಳೆದುಕೊಳ್ಳಲು ಆಸೆಯಿಲ್ಲದೆ, ತನ್ನ ತಾಯ್ನಾಡಿಗೆ ಹಿಂದಿರುಗಲು ಯೋಚಿಸಿ, ಈ ದೇಶವನ್ನು ಬಿಡುವ ಮುನ್ನ, ಒಮ್ಮೆ ದಕ್ಷಿಣ ಹಿಂದೂಸ್ಥಾನವನ್ನೆಲ್ಲಾ ನೋಡಬೇಕೆಂಬ ಬಯಕೆಯಿಂದ, ಬರುತ್ತಿರುವ ದಾರಿಯಲ್ಲಿ—

ಸಂತೋಜಿ ಘೋರ್ಪಡೆಯ ಲೂಟಿಗಾರ ಸೇನೆಯ ದಾಳಿಯಲ್ಲಿ ಸಿಕ್ಕಿ ಅವನ ಕೈ ಬರಿಗೈಯಾಗಿತ್ತು.

ಅಷ್ಟು ವರ್ಷದ ಗಳಿಕೆಯೆಲ್ಲವೂ, ಒಂದೇ ದಿನದಲ್ಲಿ ಬಿಸಿಲಿಗೆ ಬಿದ್ದ ಮಂಜುಗಡ್ಡೆಯಂತೆ ಕರಗಿಹೋಗಿತ್ತು.

ಹಾಗಾದಾಗ, ಜಾರ್ಜನ ಹೃದಯದಲ್ಲಿ ಮತ್ತೊಮ್ಮೆ ದ್ವೇಷದ ದಾವಾನಲ, ಪ್ರತೀಕಾರದ ಉಗ್ರತೃಷೆ ದಹದಹಿಸಿತ್ತು — ಸಂತೋಜಿ ಘೋರ್ಪಡೆಯ ವಿರುದ್ಧ.

'ಅದೊಂದೇ. ನನ್ನ ಪಾಲಿಗಿನ್ನು ಉಳಿದಿರುವುದು ಅದೊಂದೇ ಕೆಲಸ'

—ಎಂದು ನಿಶ್ಚಯಿಸಿಕೊಂಡಿದ್ದ ಜಾರ್ಜ್.

ಆ ಹೊತ್ತಿನಲ್ಲಿ.

ಆದರೆ ಇಂದು—

ಇಂದು ದುರ್ಗದ ಅರಮನೆಯ ಅಂತಃಪುರದಲ್ಲಿ, ಮೆಹೆರ್‌ಬಾನುವಿನ ಗಾಯನ ಕೇಳಿದಾಗ, ಆಕೆಯ ಸಮ್ಮೋಹಕ ರೂಪವನ್ನು ನೋಡಿದಾಗ—

ಅವನ ಹೃದಯದಲ್ಲಿ ರೋಸಿಟಾಳ ನೆನಪು—

ರೋಸಿಟಾ ಜೀವಂತಳಾಗಿದ್ದಾಗ ತನ್ನ ಹೃದಯದಲ್ಲಿ ಮೂಡಿಸಿದ ಬಗೆ ಬಗೆಯ, ಮಧುರ ಕೋಮಲ ಭಾವನೆಗಳ ನೆನಪು ಮತ್ತೆ ಮೂಡಿಬಂದು ಅವನ ಚಿತ್ತದಾಳದಲ್ಲಿ ಹುದುಗಿದ್ದ ಕಂಬನಿಯನ್ನು ಉದ್ರೇಕಿಸಿತ್ತು.

ರೋಸಿಟಾಳನ್ನು ಬಿಟ್ಟು ಬಂದ ಬಳಿಕ, ಅವನು ಕಂಡ ಮೊದಲನೆಯ ಹೆಣ್ಣೇ ಮೆಹರ್‌ಬಾನುವೇನೂ ಅಲ್ಲ.

ಸುಖಲೋಲುಪತೆಯ ತವರಾದ ಮೊಗಲ್ ಸೇನೆಯ ಮಧ್ಯದಲ್ಲಿ ವಾಸ ಮಾಡಬೇಕಾಗಿ ಬಂದ ಜಾರ್ಜ್, ಹತ್ತಾರು ಕಡೆಯ ಹೆಂಗಸರಲ್ಲಿ ತನ್ನ ದೇಹದ ಬಯಕೆಯನ್ನು ತೀರಿಸಿಕೊಂಡಿದ್ದ. ಅಂಥ ಹೆಣ್ಣುಗಳಲ್ಲಿ ಸುಂದರಿಯರೂ ಇದ್ದರು. ಆದರೆ ಅವನ ಕಾಮೋಪಭೋಗಕ್ಕೆ ಒದಗಿ ಬಂದ ಹೆಣ್ಣುಗಳಲ್ಲಿ ಯಾರೂ ಅವನಲ್ಲಿ ಮೆಹರ್‌ಬಾನುವಿನ ಹಾಗೆ ತನ್ನ ಬಾಳಿನ ಪ್ರಥಮ ಪ್ರಣಯದ ನೆನಪನ್ನು ಕೆರಳಿಸಿರಲಿಲ್ಲ. ತನ್ನ ಬಾಳಿನ ದುರಂತಪ್ರಣಯದ ನೆನಪಿನಿಂದ, ನಾಲಗೆಯನ್ನು ಕಹಿ ಮಾಡಿಕೊಂಡು, ಕೈಗೆ ಸಿಕ್ಕ ಸುಖವನ್ನು ನೀರಸವಾಗಿ ಮಾಡಿಕೊಳ್ಳುವ ಇಚ್ಛೆಯೂ ಅವನಿಗಿರಲಿಲ್ಲ.

ದಿನದ ಊಟ ನಿದ್ರೆಯ ಹಾಗೆ ಹೆಣ್ಣಿನ ಸೌಖ್ಯವೂ ಯಾವ ವಿಶೇಷ ಮಹತ್ವವೂ ಇಲ್ಲದ ದೈಹಿಕ ಅಗತ್ಯಗಳಲ್ಲೊಂದಾಗಿತ್ತು. ಆ ಅಗತ್ಯಗಳನ್ನು ತೀರಿಸಿಕೊಂಡ ಹಾಗೇ ಈ ಅಗತ್ಯವನ್ನೂ ತೀರಿಸಿಕೊಂಡು, ಬಳಿಕ ಮರೆಯುತ್ತಿದ್ದ. ಈ ಕ್ರಮಕ್ಕೆ ಅವನ ಮೈ, ಮನಸುಗಳು ಒಗ್ಗಿದ ಬಳಿಕ, ಹೆಣ್ಣನ್ನು ಪ್ರೀತಿಸಬೇಕು, ಆಕೆಯನ್ನು ಪ್ರೀತಿಸಿ, ಆಕೆ ತನ್ನನ್ನು ಪ್ರೀತಿಸುವಂತೆ ಮಾಡಿ, ಆಕೆಯ ಪ್ರೇಮವನ್ನು ಪಡೆಯಬೇಕು ಎಂಬುದೇ ಅವನಿಗೆ ಮರೆತುಹೋಗಿತ್ತು.

ಒಮ್ಮೆ ಭಗ್ನಪ್ರಣಯಿಯಾದ ಅವನಿಗೆ ಈ ಮರವೆಯೇ ಪರಮಸುಖವಾಗಿತ್ತು.

ಆದರೆ ಇಂದು—

ಮೆಹರ್‌ಬಾನುವಿನ ಲಾವಣ್ಯವನ್ನು ಕಂಡಾಗ—

ಹೃದಯವೀಣೆಯ ಶ್ರುತಿಗಳನ್ನು ಮಿಡಿದು, ಪ್ರಸುಪ್ತ ರಾಗಭಾವಗಳನ್ನು ಕೆರಳಿಸುವ ಆಕೆಯ ಮಂಜುಲ ಗಾಯನವನ್ನು ಕೇಳಿದಾಗ—

ತನ್ನ ಯೌವನದ ಪ್ರಭಾತ ಕಾಲದಲ್ಲಿ, ಸುಂದರ ಯುವತಿಯೋರ್ವಳನ್ನು ಕಂಡಾಗ ಮೂಡಿದ, ದೇಹದಿಂದ ಪ್ರಚೋದಿತವಾದರೂ ದೇಹಾತೀತವಾದ ಒಲವು, ಆರಾಧನೆ, ಬೆರಗಿನ ಭಾವನೆಗಳೆಲ್ಲವೂ ಇಂದು ಮತ್ತೆ ಮನದಲ್ಲಿ

ಮೂಡಿ, ಅವನ ಬಳಲಿದ ಮೈ, ಮನಗಳನ್ನಾವರಿಸಿದ ಅಸುಂದರ, ಕ್ರೂರತೆಯ ಮೈಲಿಗೆಯನ್ನು ತೊಳೆದು, ಮುಗ್ಧ ಯೌವ್ವನದ ಹೊಸತನ ಮತ್ತೆ ಅವನಲ್ಲಿ ಪ್ರಾದುರ್ಭವಿಸಿತ್ತು.

ಅವನ ಬಾಳಿನ, ನಿರಾಶಾನೈಕತಾವೃತ ಭಗ್ನಭೂಮಿಯಲ್ಲಿ ಹೊಸ ಬಯಕೆಯ ಹಸಿರು ಚಿಗುರೊಡೆದಿತ್ತು.

ಈ ಬಯಕೆ ಪಲ್ಲವಿಸಿದಾಗ, ಅವನೂ ಅದರ ವಿರುದ್ಧ ಹೋರಾಡಲು ಯತ್ನಿಸಿದ್ದ. ಆದರೆ, ಬಹುದಿನದ ಪ್ರಯತ್ನಪೂರ್ಣ ನಿರೋಧದ ಅಣೆಕಟ್ಟನ್ನು ಕಡಿದು ನುಗ್ಗಿ ಬಂದ ಮಧುರ ರಾಗರಸದ ಹೊಳೆ, ಆ ಹೋರಾಟಗಳನ್ನು ವಿಫಲಗೊಳಿಸಿ, ತಾನೇ ತಾನಾಗಿ ವಿಜೃಂಭಿಸಿ, ತಾನೆ ಅವನಾಗಿ, ಮೆಹರ್ ಬಾನುವಿನತ್ತ ನೋಡಿತ್ತು.

ಪರಸ್ತ್ರೀಯನ್ನು ಹಾಗೆ ನೋಡಬಾರದು ಎಂಬ ಸಭ್ಯತೆಯೂ ಸಂಯಮವನ್ನೂ ಉಲ್ಲಂಘಿಸಿ, ಅವನ ಕಣ್ಣುಗಳು ಅವಳತ್ತ ನೋಡಿದ್ದವು.

ಈ ಅಪ್ಸರೆ ತನ್ನವಳಾದರೆ, ಮತ್ತೆ ಭಗ್ನವಾದ ತನ್ನ ಬಾಳಸೌಧವನ್ನು ಸುಂದರವಾಗಿ ನಿರ್ಮಿಸಬಹುದೆಂಬ ಭರವಸೆಯಿಂದ ಅವಳತ್ತ ಈಕ್ಷಿಸಿತ್ತು.

ತನ್ನ ಕಣ್ಣುಗಳಲ್ಲಿ ಮಿಂಚಿದ ಆ ಭಾವ ಆಕೆಗೂ ಅರಿವಾಯಿತೇನೋ—

ಇರಬೇಕು—ಅದಕ್ಕಾಗಿಯೆ ಅವನು ತನ್ನ ಇದುರಿನಲ್ಲಿರಲೂ ಅನರ್ಹನೆಂಬಂತೆ ಆಚೆಗೆ ಅಟ್ಟಿದ್ದಳು.

ಈಗ—

ಮುಂದೇನು ?

ಕೊಳದ ತಡಿಯ ತಂಗಾಳಿಯಲ್ಲಿ ಮೈಚಾಚಿದಾಗ, ಆ ರೂಪಸಿಯ ದರ್ಶನದಿಂದ ಉದ್ರೇಕಿತವಾದ ಭಾವನೆಗಳೆಲ್ಲವೂ, ಬುಟ್ಟಿಯಲ್ಲಿ ಹುದುಗಿದ ಹಾವುಗಳಂತೆ ತಲೆ ಮರೆಸಿಕೊಂಡ ಬಳಿಕ ಅವನಿಗನಿಸಿತ್ತು—

"ನನ್ನದು ಮೂರ್ಖ ಬಯಕೆ; ಎಂದೆಂದೂ ಸತ್ಯವಾಗಲಾರದ ಕನಸು"

"ಹಾಗಾದರೆ ಮುಂದೇನು ?"

"ಮುಂದೇನು ?"

ವಿವೇಚನೆಯೊಂದಿಗೆ ಮೂಡಿದ ಈ ಪ್ರಶ್ನೆ ಅವನಿಗೆ ಇದಿರಾದಾಗ, ಜೊತೆಗೆ, ಮರುಕಳಿಸಿದ ಪ್ರಣಯದ ಉರಿ ಹೊತ್ತು ದುರ್ಗದಲ್ಲಿರುವುದು ಅಸಾಧ್ಯವೆನಿಸಿ, 'ಶತ್ರುರಕ್ತದಲ್ಲಿ, ಪ್ರತೀಕಾರ ತೃಷೆಯ ತೃಪ್ತಿಯಲ್ಲಿ ಆ ಉರಿ

ಯನ್ನು ಆರಿಸುವುದೊಂದೇ ದಾರಿ ' ಎಂದು ತೋರಿ,—

" ಹೊರಟುಬಿಡಬೇಕು, ಆದಷ್ಟು ಬೇಗ ದುರ್ಗದಿಂದ ಹೊರಟು ಬಿಡಬೇಕು. ಶತ್ರು ಹತ್ತಿರ ಇದ್ದಾನೆ ಎಂಬ ಸುದ್ದಿಯನ್ನು, ಇಲ್ಲಿ ಕುಳಿತು ಕಾಯುವುದಕ್ಕಿಂತ ಶತ್ರುವನ್ನು ಹುಡುಕಿಕೊಂಡು ಹೋಗುವುದೇ ಲೇಸು."

—ಎನಿಸಿ, ಆ ಅನಿಸುವಿಕೆಗೇ ವಿದುಳನ್ನು ಮಾರಿ—

" ಆದದ್ದಾಗಲಿ, ಹಗಲು ದೊರೆಗಳನ್ನು ಕಂಡು, ಅವರ ಅಪ್ಪಣೆ ಪಡೆದು ಇಲ್ಲಿಂದ ಹೊರಟುಬಿಡುವುದೇ ಲೇಸು "

—ಎಂದು ನಿರ್ಧರಿಸಿ, ಗೋಪಾಲಸ್ವಾಮಿಯ ಹೊಂಡದ ತಡಿಯಿಂದ ಮೇಲೆದ್ದು, ತನ್ನ ಬಿಡಾರದತ್ತ ಹೆಜ್ಜೆ ಹಾಕಿದ.

ಆ ಹೊತ್ತಿನಲ್ಲಿ ಅವನಿಗೆ ಏಕೋ ಮುಗಿಲಲ್ಲಿಯ ತಾರೆಗಳು ತನ್ನನ್ನು ಕರುಣೆ ತುಂಬಿದ ನೋಟದಿಂದ ದಿಟ್ಟಿಸಿದಂತೆ ತೋರಿ, ತಂಗಾಳಿ ತನಗಾಗಿ ನಿಟ್ಟುಸಿರಿಟ್ಟಂತೆ ಭಾಸವಾಗಿ, ಅವನ ಹೃದಯ ಭಾರವಾಯಿತು.

೨

ಅತ್ತ—

ಜಾರ್ಜ ಡ್ಯುವೋಲೊನನ್ನು ನಿರ್ದಾಕ್ಷಿಣ್ಯವಾಗಿ ಸಭೆಯಿಂದ ಹೊರಗಟ್ಟಿದ ಮೆಹರ್ ಬಾನುವಿನ ಹೃದಯವೂ ಅಶಾಂತವಾಗಿತ್ತು.

ವಿಚಿತ್ರ ಬಯಕೆಯ ಉರಿಯನ್ನು ತುಂಬಿಕೊಂಡು ತನ್ನನ್ನು ಸುಟ್ಟು ಭಸ್ಮ ಮಾಡುವಂತೆ ನೋಡುತ್ತಿದ್ದ ಜಾರ್ಜನ ಕಣ್ಣುಗಳ ಇದುರಿನಲ್ಲಿ, ಶಾಂತ ವಾಗಿ ಕುಳಿತು ಹಾಡುವುದು ಸಾಧ್ಯವಿಲ್ಲ ಎನಿಸಿ, ಮೆಹರ್, ಅವನನ್ನು ಆಚೆಗೆ ಅಟ್ಟಿದ್ದಳು.

ಅವಳ ಅಪ್ಪಣೆಯಂತೆ ಅವನು ಅಲ್ಲಿಂದ ಹೊರಟುಹೋಗಿದ್ದ—

ಆದರೆ ಅವನ ಹೋಗುವಿಕೆ, ಅವನ ಇರುವಿಕೆಗಿಂತ ಹೆಚ್ಚಿನ ಅಶಾಂತಿ ಯನ್ನು ಮೂಡಿಸಿತ್ತು ಮೆಹರ್ ಬಾನುವಿನಲ್ಲಿ.

ಆ ಉದ್ವಿಗ್ನ ಚಿತ್ತದ ಹೊರೆ ಹೊತ್ತು ಹಾಡುವುದು ಸಾಧ್ಯವಾಗದೆ, ಆ ಪ್ರಯತ್ನ ಮಾಡಿ ವಿಫಲಳಾದ ಮೆಹರ್‌ಬಾನು, ಎದ್ದು ನಿಂತು ನಾಯಕರನ್ನು ಬೇಡಿದಳು—

"ಜಹಾಪನಾ ಈ ಬಾಂದಿಯನ್ನು ಮನ್ನಿಸಬೇಕು."

ಆ ದಿನ ಸಭೆಯಲ್ಲಿ ಅತ್ಯನಿರೀಕ್ಷಿತವಾಗಿ ನಡೆದ ಅಚಾತುರ್ಯದಿಂದ ಉಳಿದವರಷ್ಟೇ ಕಿಂಕರ್ತವ್ಯಮೂಢರಾದ ನಾಯಕರಿಗೂ, ಆಕೆಯ ಮಾತಿಗೆ ಏನು ಹೇಳಬೇಕೆಂದು ತೋಚದೆ—

"ಆಯಿತು – ಇಂದಾದುದರಲ್ಲಿ ನಮಗೂ ಪಾಲಿದೆ. ಅಪರಿಚಿತರನ್ನು ನಾವು ಇಂದಿನ ಆಪ್ತಗೋಷ್ಠಿಗೆ ಆಹ್ವಾನಿಸಬಾರದಾಗಿತ್ತು. ಮರೆತುಬಿಡಿ. ನಿಮಗೇನೂ ಅಭ್ಯಂತರವಿಲ್ಲದಿದ್ದರೆ ಗಾಯನ ಮುಂದುವರಿಯಬಹುದು."

—ಎಂದರು.

"ಅಷ್ಟಾದರೂ ಮಾಡುವುದು ನನ್ನಿಂದ ಸಾಧ್ಯವಾಗಿದ್ದಿದ್ದರೆ ಒಳಿತಾಗುತ್ತಿತ್ತು. ಆದರೆ ಆ ಭಾಗ್ಯ ಇಂದು ನನಗಿಲ್ಲವಾಯಿತು. ಖಾವಂದರು ಕೃಪೆ ಮಾಡಿ ನನ್ನ ಉದ್ಧಟತನವನ್ನು ಮನ್ನಿಸಬೇಕು."

—ಅಪಾರ ಯಾತನೆ ತುಂಬಿದ ಧ್ವನಿಯಲ್ಲಿ ಬೇಡಿದಳು ಮೆಹರ್‌ಬಾನು.

ಅವಳ ಮಾತನ್ನು ಕೇಳಿ, ಆ ದಿನ ತೃಪ್ತಿಯಾಗುವಷ್ಟು ಮಟ್ಟಿಗೆ ಆಕೆಯ ಸಂಗೀತಸುಧೆಯನ್ನು ಹೀರಬೇಕೆಂದು ಬಯಸಿದ್ದ ನಾಯಕರಿಗೆ ನಿರಾಶೆಯಾಯಿತು. ಆದರೆ ಅದನ್ನು ತಮ್ಮ ಮುಖದಲ್ಲಾಗಲಿ, ಧ್ವನಿಯಲ್ಲಾಗಲಿ ತೋರಿಸದೆ—

"ಸರಿಯೆ – ಆಗಲಾಗದುದಕ್ಕೆ ಯೋಚಿಸಿ ಫಲವೇನು? ಇಂದು ನಮಗಾದ ಅರಕೆಯನ್ನು ಮುಮ್ಮಡಿಯಾಗಿ ತೀರಿಸಬಲ್ಲ ಶಕ್ತಿಯನ್ನು ಭಗವಂತ ತಮಗೆ ಅನುಗ್ರಹಿಸಿದ್ದಾನೆ. ಆತನ ಚಿತ್ತ – ತಮ್ಮ ಸಂತೋಷ ಎರಡೂ ಸಂಗಮವಾದಂದು ಅದಾಗಲಿ."

—ಎಂದು ಹೇಳಿ, ಸಭೆ ಬರಖಾಸ್ತಾಯಿತು ಎಂಬಂತೆ, ನೆರೆದ ಸಭಾಸದರತ್ತ ನೋಡಿ, ಕರಣಿಕರತ್ತ ನೋಡಿದರು.

ಆ ಕಣ್ಣುಸನ್ನೆಯ ಸೂಚನೆಯನ್ನರಿತ ಕರಣಿಕರು, ಅಂತಃಪುರದ ಅಪ್ಪಣೆಯರಿಂದ ನೆರೆದ ಸಭಾಸದರಿಗೆ, ಹೂ, ಗಂಧ, ವೀಳಯವನ್ನು ಹಂಚಿಸಿದ ಬಳಿಕ, ಒಬ್ಬೊಬ್ಬರಾಗಿ, ಸಭೆಯಲ್ಲಿ ನೆರೆದವರೆಲ್ಲರೂ ನಾಯಕರಿಗೆ

ಮುಜುರೆಯನ್ನೊಪ್ಪಿಸಿ ತೆರಳಿದರು.

ಎಲ್ಲರೂ ಹೋದ ಬಳಿಕಲೂ, ಇನ್ನೂ ಆಸನದಲ್ಲೇ ಕುಳಿತಿದ್ದ ನಾಯಕರನ್ನು ಕಂಡು ಮೆಹರ್ ಬಾ—

"ಇನ್ನು ನನಗೂ ಅಪ್ಪಣೆಯೇ ?"

—ಎಂದು ಬೇಡಿದಳು.

"ಈ ದಿನ ನಿಮಗೆ ಅಪ್ಪಣೆ ಕೊಡುವ ಅಧಿಕಾರ, ನಮ್ಮದಲ್ಲ; ಅಂತಃಪುರದ ಒಡತಿಯರಾದ ನಾಗತಿಯವರದು. ಅವರಿಗೂ ನಿಮ್ಮ ಪರಿಚಯ ಮಾಡಿಕೊಳ್ಳಬೇಕೆಂಬ ಅಭಿಲಾಷೆಯಿದೆ. ಅದಕ್ಕಾಗಿಯೇ ನಿಮ್ಮನ್ನು ಇಲ್ಲಿ ನಿಲ್ಲಿಸಿಕೊಂಡದ್ದು."

—ಎಂದು ನಾಯಕರು, ತೆರೆಯ ಮರೆಯಲ್ಲಿ ಕುಳಿತ, ಪಟ್ಟದರಸಿ, ಸಿದ್ದವ್ವ ನಾಗತಿಯತ್ತ ನೋಡಿದರು.

ನಾಯಕರ ಬಾಯಲ್ಲಿ ಬಂದ ಆ ಮಾತು ಮುಗಿಯುತ್ತಿದ್ದ ಹಾಗೇ, ಎದುರಿಗಿದ್ದ ತೆರೆಯನ್ನು ಸರಿಸಿ, ಉನ್ನತಾಸನದಿಂದ ಇಳಿದು ಬಂದ ಸಿದ್ದವ್ವ ನಾಗತಿಯ ಭವ್ಯ ಆಕಾರವನ್ನು ಕಂಡು, ತಾನಾಗಿಯೇ ಮೆಹರ್ ಬಾನುವಿನ ತಲೆ ಮಣಿಯಿತು.

ಆ ಅಭಿವಂದನೆಯನ್ನು ಪ್ರಸನ್ನ ಗಾಂಭೀರ್ಯದಿಂದ ಸ್ವೀಕರಿಸಿ ನಾಗತಿ—

"ನಮ್ಮಿಂದ ನಿಮಗೆ ತೊಂದರೆಯಾಯಿತೇನೊ ?"

—ಎಂದು ನುಡಿದಳು.

"ತೊಂದರೆ ! ನಿಮ್ಮಿಂದ ನನಗೆ ತೊಂದರೆಯೇ ? ದಾಸಿಗೆ ತಾವು ಹಾಗೆ ಹೇಳಬಾರದು. ತಾವು ನನ್ನ ಪರಿಚಯ ಮಾಡಿಕೊಳ್ಳ ಬಯಸಿದುದು, ನನ್ನ ಬಾಳಿನ ಮಹಾಭಾಗ್ಯ."

"ತಾವು ಹಾಗೆ ಹೇಳಬಾರದು. ತಮ್ಮಂಥದರ ಬಾಯಲ್ಲಿ ಅಂಥ ಮಾತು ಬರಬಾರದು."

—ಮೆಹರ್ ಬಾನುವಿನ ಮಾತನ್ನು ಕೇಳಿ ಕೊಂಚ ಬೇಸರವಾದಂತೆ ಹೇಳಿದಳು ನಾಗತಿ.

"ನಾನಾಡಿದುದು ತಪ್ಪೇ ರಾಣೀ ಸಾಹೇಬಾ ?"

"ಹೂ."

"ನನ್ನ ತಪ್ಪೇನೋ ತೋರಿಸಿಕೊಟ್ಟು, ಮನ್ನಿಸಬೇಕೆಂದು ಬೇಡುತ್ತೇನೆ."

"ನಿಮ್ಮನ್ನೇ ನೀವು ದಾಸಿ, ಬಾಂದಿ ಎಂದು ಮಾತುಮಾತಿಗೂ ಕರೆದುಕೊಳ್ಳುವುದು ತಪ್ಪು. ಅದು ನಿಮ್ಮಂಥವರು ಉಪಯೋಗಿಸಬಹುದಾದ ಮಾತುಗಳಲ್ಲ."

"ಹೇಗೆ ಎಂದು ಕೇಳಬಹುದೆ ?"

"ನಮ್ಮ ದೇವರು ಶ್ರೀಕೃಷ್ಣನ ಹೆಸರನ್ನು ನೀವು ಕೇಳಿದ್ದೀರಲ್ಲವೆ...."

"ಉಂಟೆ – ಮೀರಾಪ್ರಭು ಗೋಪಾಲ ಗಿರಿಧಾರಿಯ ಹೆಸರನ್ನು ಯಾರು ಕೇಳಿಲ್ಲ ? ನಿಮ್ಮಂತೆಯೇ ನನಗೂ ಆತ ಆರಾಧ್ಯದೈವ – ಆತನ ಹೆಸರು ಕೇಳಿಲ್ಲವೆಂದರೆ ಅಪರಾಧವಾದೀತು "

ಹಿಂದೂ ಮತದವರನ್ನು ನಾಯಿ ನರಿಗಳೆಂಬಂತೆ ಕಂಡು ದ್ವೇಷಿಸುವ ಮುಸ್ಲಿಂ ಜಾತಿಯ ಹೆಣ್ಣಿನ ಬಾಯಿಂದ ಬಂದ ಆ ಮಾತನ್ನು ಕೇಳಿ ನಾಗತಿ, ನಾಯಕರಿಬ್ಬರಿಗೂ ಮಿಂಚನ್ನು ಮುಟ್ಟಿದಂತಾಯಿತು. ಒಂದು ಕ್ಷಣಕಾಲ ಅವರಿಬ್ಬರೂ ಏನೊಂದೂ ಮಾತನಾಡದೆ ನಿಂತುಬಿಟ್ಟರು. ಬಳಿಕ ಆ ಅನಿರೀಕ್ಷಿತ ಮಾತಿನ ಆಘಾತದಿಂದ ಚೇತರಿಸಿಕೊಂಡು, ನಾಯಕರೇ ಪ್ರಶ್ನೆ ಮಾಡಿದರು—

"ಇದು........ಈಗ ನೀವು ಆಡಿದ ಮಾತು........ನಿಮ್ಮ ಹೃದಯದಿಂದ ಬಂದದ್ದೇ ?"

"ಹೃದಯಾಂತರಾಳದಿಂದ ಬರದೆ, ನಾಲಗೆಯ ತುದಿಯಲ್ಲಿ ಮೊಳೆತ ಮಾತನ್ನು ಆಡುವ ಅಭ್ಯಾಸ ಈ ಬಾಂದಿಗಿಲ್ಲ."

—ನಾಯಕರ ಪ್ರಶ್ನೆಯಿಂದ ಕೊಂಚ ಕ್ಷೋಭೆಗೊಂಡವಳಂತೆ ಹೇಳಿದಳು ಮೆಹರ್‌ಬಾನು.

ಆಕೆಯ ಮಾತುಗಳಿಂದ ಆಕೆಯ ಮಾತಿನ ಭಾವ ಅರಿವಾಗಿ ನಾಯಕರು—

"ನಮ್ಮ ಪ್ರಶ್ನೆಯ ಉದ್ದೇಶ, ಆಶ್ಚರ್ಯವೇ ಹೊರತು, ಅಪಮಾನಗೊಳಿಸುವುದಲ್ಲ. ನಮ್ಮ ಮಾತನ್ನು ತಾವು ಅಪಾರ್ಥ ಮಾಡಿಕೊಳ್ಳಬಾರದು."

—ಎಂದು ಹೇಳಿದರು.

"ಅಪಾರ್ಥ ಮಾಡಿಕೊಳ್ಳುವ ಉದ್ದೇಶ ನನಗೂ ಇಲ್ಲ. ಆದರೂ

ತಮಗೆ ನನ್ನ ಮಾತಿನಿಂದ ಆಶ್ಚರ್ಯವಾದದ್ದೇಕೆ ?"

"ನಮ್ಮ ಮಾತಿನಿಂದ ನೀವು ಬೇಸರಗೊಳ್ಳುವುದಿಲ್ಲವೆಂದರೆ ಹೇಳುತ್ತೇನೆ........"

"ಇಲ್ಲ........ಹೇಳಿ........"

"ನಾವಾಡುವುದು ಸಾಮಾನ್ಯ ತಿಳುವಳಿಕೆಯ ಮಾತು. ಅದರ ಪ್ರಕಾರ—ಮುಸ್ಲಿಮರಿಗೆ ಹಿಂದೂಗಳ ದೇವತೆಗಳನ್ನು ಪ್ರೀತಿಸುವುದಿರಲಿ, ಅವರ ಹೆಸರು ಕೇಳುವುದೇ ಪಾಪ. ಹಿಂದೂ ದೇವದೇವತೆಗಳನ್ನು ದ್ವೇಷಿಸುವುದು, ಹಿಂದೂ ದೇವತಾಮಂದಿರಗಳನ್ನು ಭಗ್ನ ಮಾಡುವುದು, ಹಿಂದೂ ಮತದ ಹೆಸರೂ ಉಳಿಯದಂತೆ ನಾಶ ಮಾಡುವುದು—ಇವೇ ಮುಸ್ಲಿಮರ ಪಾಲಿಗೆ ಅತ್ಯಂತ ಪವಿತ್ರ ಕರ್ತವ್ಯಗಳು ಎಂದು ನಾವು ಕೇಳಿದ್ದೇವೆ. ಅದು ಸತ್ಯವಲ್ಲವೇ ?"

ನಾಯಕರು ಆಡಿದ ಮಾತನ್ನು ಕೇಳಿ ಮೆಹರ್‌ಬಾನುವಿನ ಮುಖ ಬೆಂಕಿಯ ಝಳ ಸೋಕಿದ ಹೂವಿನಂತೆ ಬಾಡಿ—

"ತಾವು ಕೇಳಿದುದು ಸತ್ಯವಲ್ಲ ಜಹಾಪನಾ, ಸತ್ಯದ ಘೋರ ವಿಪರ್ಯಾಸ. ಘಜನಿ ಮಹಮುದ್, ಮಲ್ಲಿಕ್‌ಕಾಫರ್ ಔರಂಗಜೇಬನಂಥ ಪಾಖಂಡಿಗಳ ಮಾತುಗಳ ಆಧಾರದ ಮೇಲೆ ಪ್ರಭುಗಳು ಇಸ್ಲಾಂನ ಸತ್ಯಾಸತ್ಯತೆಗಳ ನಿರ್ಣಯ ಮಾಡುವಂತಿದೆ."

—ಎಂದು ವಿಷಣ್ಣಳಾಗಿ ಹೇಳಿದಳು.

"ಅಂದರೆ....ಅವರು ಮುಸ್ಲಿಮರಲ್ಲವೇ ?"

—ಚಕಿತರಾಗಿ ಕೇಳಿದರು ನಾಯಕರು.

"ಅಲ್ಲ."

"ಮತ್ತೆ—?"

"ಪವಿತ್ರ ಇಸ್ಲಾಂನ ಉಜ್ವಲ ನಾಮಕ್ಕೆ ಹತ್ತಿದ ಘನಘೋರ ರಕ್ತ ಕಳಂಕಗಳು; ಇಸ್ಲಾಂನ ಪವಿತ್ರ ಪ್ರಭೆಯನ್ನು ಮುಸುಕಿದ ಶನಿಗತ್ತಲು. ಅವರು ನಿಜವಾದ ಮುಸ್ಲಿಮರಲ್ಲ ಆ ಮತದ ದ್ರೋಹಿಗಳು."

"ಏನು, ಅವರು ನಿಜವಾದ ಮುಸ್ಲಿಮರಲ್ಲವೇ? ಹಾಗಾದರೆ ನಿಜವಾದ ಮುಸ್ಲಿಮರು ಯಾರು ?"

"ಸರ್ವಧರ್ಮ ಸಮಾನತೆಯನ್ನು ಸಾರುವ 'ದೀನ್ - ಇಲಾಹಿ'

ಮತಸ್ಥಾಪಕ ಅಕ್ಬರ್, ಗೀತೋಪನಿಷತ್ತುಗಳಲ್ಲಿ ತನ್ನ ಬಾಳ ಬೆಳಕನ್ನು ಕಂಡುಕೊಂಡ ದಾರಾಷುಕೊ, 'ರಾಮ – ರಹೀಮ್, ಈಶ್ವರ – ಅಲ್ಲಾ, ಕಾಶಿ – ಕಾಬಾ' ಎಲ್ಲವೂ ಒಂದೇ ಎಂದು ಸಾರಿದ ದೀನಬಂಧು ಕಬೀರ್, 'ದೇವವಧು'ವಾದ ಜೇಬುನ್ನಿಸಾ, ಮಹಾಕವಿ ಉಮರ್‌ಖಯ್ಯಾಂ – ಇವರು ನಿಜವಾದ ಮುಸ್ಲಿಮರು. ಇಸ್ಲಾಂ ಎಂದರೆ ಕೊಲೆಗಡುಕತನಕ್ಕೆ ಪರ್ಯಾಯ ಶಬ್ದವಲ್ಲ ಜಹಾಪನ. ಪೈಗಂಬರರು ತಮ್ಮ ಪವಿತ್ರ ಖುರಾನಿನಲ್ಲಿ ಸಾರಿದ 'ಅಲ್ಲಾಹೊ ಅಕ್ಬರ್' ಎಂಬ ಘೋಷವೂ, ಉಪನಿಷತ್ತಿನಲ್ಲಿ 'ಏಕಂ ಸದ್ವಿಪ್ರಾ ಬಹುಧಾವದಂತಿ' ಎಂಬ ಘೋಷವೇ; ಬಸವಣ್ಣನವರು, ಹೇಳಿದ 'ದೇವನೊಬ್ಬ ನಾಮ ಹಲವು ಕಾಣಿರೋ' ಎಂಬ ಮಾತೇ. 'ಇಸ್ಲಾಂ ಒಂದೇ ಪವಿತ್ರ ಮತ, ಉಳಿದದ್ದೆಲ್ಲವೂ ಹಲಾಲ್' ಎಂದು ಹೇಳುವವರು, ತಮ್ಮ ಕುರುಡುಗಣ್ಣಿಗೆ ಕಂಡ ಕತ್ತಲೇ ಬೆಳಕೆಂದು ಸಾರುವ ಗೂಬೆಗಳು. ಅಂಥ ಹಿಸುಣರ ಮಾತನ್ನೇ ಸತ್ಯವೆಂದು ಪ್ರಭುಗಳೂ ಭ್ರಮಿಸಬಾರದು. ಮನದ ಸಣ್ಣತನ ನಿರ್ಮಿಸಿದ ಕತ್ತಲು ತೆರೆಯನ್ನು ಹರಿದು ಹೊರ ಬರಲಾಗದ ಹೆಳವರಿಗೆಂದೂ ಸತ್ಯ ಸೂರ್ಯನ ದರ್ಶನವಾಗಲಾರದು. ಈಶಾವಾಸ್ಯೋಪನಿಷತ್ತಿನಲ್ಲಿ ಒಂದು ಪ್ರಾರ್ಥನೆ ಇದೆ ಪ್ರಭು......."

"ಏನು?"

"'ಹಿರಣ್ಮಯೇಣ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ.
ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ.

—ಎಂದು ಆ ದಿವ್ಯ ಉಪನಿಷತ್ತಿನ ಋಷಿ ಬೇಡಿದ್ದಾನೆ.......' ಹೇ ಪೂಷನ್, ಜ್ಯೋತಿರ್ಮಯನಾದ ಬಂಗಾರದ ಮುಚ್ಚಳದಿಂದ ಸತ್ಯದ ಮುಖವು ಮುಚ್ಚಲ್ಪಟ್ಟಿದೆ. ಸತ್ಯ ಧರ್ಮನಾದ ನನಗೆ ಆ ಸತ್ಯವು ಗೋಚರಿಸುವಂತೆ, ಆ ಮುಚ್ಚಳವನ್ನು ತೆಗೆದು ಹಾಕು' ಎಂದು ಕೋರಿದ್ದಾನೆ. ಆ ಕೋರಿಕೆಯೇ ಎಲ್ಲ ಧರ್ಮದ ತಳಹದಿ. ತಾನು ಹಿಡಿದ ದಾರಿಯೇ ಹಿರಿದೆಂಬ ಭ್ರಾಂತಿಯೇ, ಅನಂತ ಸತ್ಯವನ್ನು ಕವಿದಿರುವ ಮಮಕಾರದ ಹೊನ್ನತಳಿಗೆ. ಅದನ್ನು ಅರಿತುಕೊಳ್ಳದ ಯಾರಿಗೂ, ಸಕಲ ಧರ್ಮಗಳ ಹೃದಯಾಂತಸ್ಥವಾದ ನಿತ್ಯಸತ್ಯದ ದರ್ಶನವಾಗದು. ಈ ಮಮಕಾರದ ಗಡಿಯನ್ನು ದಾಟಲಾಗದ ಹೆಳವನಿಗೆ, ಈ ಸತ್ಯದ ಎತ್ತರಕ್ಕೆ ಏರಲಾಗದ ಕುಬ್ಜನಿಗೆ, ಕನ್ನಡಿಯನ್ನೇ ಸೂರ್ಯನೆಂದು

ಭ್ರಮಿಸಿದ ಅಂಧನಿಗೆ ಎಂದೂ ಸತ್ಯದರ್ಶನ ಸಾಧ್ಯವಿಲ್ಲ ಪ್ರಭೂ. ಅಂಥ ಅಂಗವಿಕಲರನ್ನು ಧರ್ಮಾನುಯಾಯಿಗಳೆಂದು ತಾವು ಕರೆಯಬಾರದು."

—ಭಾವೋತ್ಕಟತೆ ತುಂಬಿದ ಧ್ವನಿಯಲ್ಲಿ, ತಾನು ಮಾತನಾಡುತ್ತಿರುವುದು ರಾಜಸನ್ನಿಧಿ ಎಂಬುದನ್ನೂ ಮರೆತು ಹೇಳಿದಳು ಮೆಹರ್‌ಬಾನು.

ಆಕೆಯ ಮಾತನ್ನು ಕೇಳಿದ ನಾಯಕ – ನಾಗತಿಯರಿಬ್ಬರೂ ಇಂದ್ರಜಾಲವನ್ನು ಕಂಡ ಶಿಶುಗಳಂತೆ ಸಮ್ಮೂಢಚಿತ್ತರಾಗಿ, ಕಡೆದಿಟ್ಟ ಬೊಂಬೆಗಳಂತೆ ನಿಂತುಬಿಟ್ಟರು.

ಅವರಿಬ್ಬರೂ ಸುಮ್ಮನಿದ್ದುದನ್ನು ಕಂಡು. ಒಂದು ಕ್ಷಣಕಾಲದ ಬಳಿಕ, ತಾನೇ ಸಾವರಿಸಿಕೊಂಡು ಹೇಳಿದಳು ಮೆಹರ್‌ಬಾನು—

"ಈ ದಿನ ನನ್ನ ನಾಲಗೆಗೆ, ಹೊತ್ತು – ಗೊತ್ತು, ಸ್ಥಳ – ಸನ್ನಿವೇಶ ಯಾವುದೂ ತಿಳಿಯದೆ ಹರಟುವ ರೋಗ ಬಡಿದುಕೊಂಡಿದೆ. ನನ್ನ ಈ ಅವಜ್ಞತೆಯನ್ನು ಮನ್ನಿಸಬೇಕು. ರಾಣೀ ಸಾಹೇಬರು ಗೋಪಾಲ ಗಿರಿಧಾರಿಯ ಬಗ್ಗೆ ಏನೋ ಹೇಳುತ್ತಿದ್ದರು. ಅದಕ್ಕೆ ಅಡ್ಡಿಯಾದೆ. ನನ್ನನ್ನು ಕ್ಷಮಿಸಿ, ತಾವು ಹೇಳಲಿದ್ದುದನ್ನು ಅಪ್ಪಣೆ ಕೊಡಿಸಬೇಕು."

"ಊಹುಂ ನಿಮಗೆ ನಾವು ಹೇಳುವಂಥದೇನೂ ಇಲ್ಲವೆಂದೇ ತೋರುತ್ತದೆ........"

"ಅಂದರೆ, ಈ ಬಾಂದಿಯ ಬಗ್ಗೆ ತಮಗೆ ಅಸಮಾಧಾನವಾಗಿದೆ."

"ಹಾಗೇನಿಲ್ಲ. ನಿಮ್ಮನ್ನು ನೀವು, ದಾಸಿ, ಬಾಂದಿ, ತೊತ್ತು ಎಂದು ಕಳೆದುಕೊಳ್ಳುವುದನ್ನು ಕೇಳಿ ದುಃಖವಾಯಿತು. ಶ್ರೀಕೃಷ್ಣ ಪರಮಾತ್ಮ ನಾರದ ಮಹರ್ಷಿಗಳಿಗೆ 'ನನ್ನ ಭಕ್ತರು ಹಾಡುವೆಡೆಯಲ್ಲಿ ನಾನಿರುತ್ತೇನೆ' ಎಂದು ಹೇಳಿದಾನಂತೆ. ಹಾಗೆ ಭಗವಂತನನ್ನು ತಮ್ಮ ಅಂಗೈಯಲ್ಲಿ ನರ್ತಿಸುವಂತೆ ಮಾಡಬಲ್ಲ ಗಾನಯೋಗಿಗಳು, ತಮ್ಮನ್ನೇ ತಾವು ಕೀಳಾಗಿ ಎಣಿಸಿಕೊಳ್ಳುವುದು ಯುಕ್ತವಲ್ಲ ಎಂದು ಹೇಳಬೇಕು ಎನ್ನಿಸಿತು. ಆದರೆ ಈಗ, ಅದಾವುದನ್ನೂ ಹೇಳಬೇಕಾದ ಅಗತ್ಯವೇ ಇಲ್ಲವೆನ್ನಿಸುತ್ತಿದೆ. ನೀವು ಈಗಾಗಲೇ ತಿಳಿಯದ ಹೊಸದೇನನ್ನೂ ಹೇಳುವ ಶಕ್ತಿ ನಮಗೇ ಇಲ್ಲ."

—ಎಂದಳು ಸಿದ್ದವ್ವ ನಾಗತಿ.

"ಅದು ತುಂಬಿದ ಕೊಡದ ಮಾತು! ಬರಿ ಕೊಡದಲ್ಲಿ ಸಣ್ಣ ಹರಳೂ ಮುದ್ದಳೆಯಷ್ಟು ಸದ್ದು ಮಾಡುತ್ತದೆ. ಇದು ನಮ್ಮಂಥವರ ಮಾತಾಯಿತು.

ರಾಣಿ ಸಾಹೇಬರಿಗೆ ತುಂಬಾ ಆಯಾಸವಾಗಿರಬೇಕು. ನನ್ನ ಹರಟೆಯಲ್ಲಿ ಬಹಳ ಹೊತ್ತು ನಿಲ್ಲಿಸಿ ಬಿಟ್ಟೆ. ಇನ್ನು ಅಪ್ಪಣೆ ಕೊಡಬೇಕು."

—ಎಂದು ಬೇಡಿದಳು ಮೆಹರ್‌ಬಾನು.

" ಆ ಮಾತು ಆಮೇಲಾಗಲಿ – ನಾವು ಒಂದು ಪ್ರಶ್ನೆ ಕೇಳಬಹುದೆ ?"

ಅದುವರೆಗೂ ಸುಮ್ಮನಿದ್ದ ನಾಯಕರು ಕೇಳಿದರು.

" ಕೇಳಿ – ನಿಮ್ಮ ಸೇವೆಗೆ ಸಿದ್ಧವಾಗಿದ್ದೇನೆ."

"ನೀವು ಕನ್ನಡದಲ್ಲಿ ಇಷ್ಟು ಮಾತನಾಡಿದಿರಿ. ಬಸವಣ್ಣನವರ ಹೆಸರು ಹೇಳಿದಿರಿ — ಇದೆಲ್ಲ ನಿಮಗೆಲ್ಲಿ ತಿಳಿಯಿತು ?"

ನಾಯಕರ ಪ್ರಶ್ನೆಯನ್ನು ಕೇಳಿ ಮೆಹರ್‌ಬಾನುವಿನ ಮುಖದ ಮೇಲೆ ಮಂದಹಾಸ ಮೂಡಿತು.

"ನಾನು ಜಾತಿಯಿಂದ ಮುಸ್ಲಿಮಳು. ಆದುದರಿಂದ ಕನ್ನಡ ನನಗೆ ಬರಬಾರದು, ಈ ನಾಡಿನ ಹಿರಿಯರ ವಿಷಯ ನನಗೆ ತಿಳಿದಿರಬಾರದು ಎಂದೇ ಪ್ರಭುಗಳು ಲೆಕ್ಕ ಹಾಕಿದಂತಿದೆ................"

"ಅದು ತಪ್ಪೇ ?"

"ಸನ್ನಿಧಾನದ ಮಾತು 'ತಪ್ಪು' ಎನ್ನುವುದು ಅನುಚಿತ; ಆದರೆ ಸರಿಯಲ್ಲ. ನಾನು ಮುಸ್ಲಿಮಳೇನೋ ನಿಜ – ಆದರೆ ಅಷ್ಟು ಮಾತ್ರಕ್ಕೇ ಅರೇಬಿಯದಿಂದಲೋ ಪರ್ಷಿಯದಿಂದಲೋ ಹಾರಿ ಬಂದು ಇಲ್ಲಿ ಇಳಿದವಳಲ್ಲ ಬಿಜಾಪುರದವಳು. ನಿಮಗೆ ಜನ್ಮ ಕೊಟ್ಟ ಕನ್ನಡ ನೆಲವೇ ನನಗೂ ತಾಯಿ. ನನ್ನ ತಾಯಿಯ ಮಾತು ನನಗೆ ಬಂದರೆ ಅದರಲ್ಲಿ ಆಶ್ಚರ್ಯವೇನು ?"

"ಆದರೂ ಮುಸ್ಲಿಮರು ಕನ್ನಡ ಮಾತನ್ನಾಡುವುದು ಅಪರೂಪ"

" ಪರಮತ ದ್ವೇಷದಿಂದ ಸ್ವಮತ ಪ್ರೇಮವನ್ನು ಪ್ರದರ್ಶಿಸುವಂತೆ ಕನ್ನಡ ವಾಡಿದರೆ ಜಾತಿಕೆಡುತ್ತದೆ ಎಂಬ ಹಾಗೆ ನಡೆದುಕೊಳ್ಳುವುದೂ ಒಂದು ಬಗೆಯ ಕುರುಡುತನ. ಇಂಥ ಹುಚ್ಚೆಲ್ಲಾ ಬಿಟ್ಟಾಗಲೇ ನಿಜವಾದ ಧರ್ಮದ ಅರಿವಾಗುವುದು."

—ಎಂದಳು ಮೆಹರ್‌ಬಾನು.

ಆಕೆಯಾಡಿದ ಮಾತನ್ನು ಒಂದು ಗಳಿಗೆ ಮೆಲಕು ಹಾಕಿದ ಬಳಿಕ ನಾಯಕರು

"ನಿಮ್ಮ ಮಾತಿನಲ್ಲಿ ತುಂಬಾ ಸತ್ಯವಿದೆ. ನಿಮಗೆ ಅನುಕೂಲವಿದ್ದರೆ ಒಂದು ಕೆಲಸ ಮಾಡಬೇಕು."

—ಎಂದರು.

"ಏನು ?"

"ಒಮ್ಮೆ ನಮ್ಮ ಗುರುಗಳಾದ ಶ್ರೀ ಮುರಘರಾಜೇಂದ್ರ ಸ್ವಾಮಿಗಳನ್ನು ಸಂದರ್ಶಿಸಿ. ನಿಮ್ಮಂಥವರನ್ನು ನೋಡುವುದರಿಂದ ಅವರಿಗೆ ತುಂಬಾ ಸಂತೋಷವಾಗುತ್ತದೆ."

"ನಾನೂ ಶ್ರೀ ಗುರುಗಳವರ ವಿಷಯವಾಗಿ ಬಹಳ ಕೇಳಿದೇನೆ. ದೆಹಲಿಯ ಬಾದಷಹರ ಆನೆಗೆ ಕಣ್ಣು ತಂದುಕೊಟ್ಟ ತಪೋಧನರಂತೆ ಅವರು. ಅವರನ್ನು ಭೇಟಿ ಮಾಡಬೇಕು. ಅವರ ಸನ್ನಿಧಿಯಲ್ಲಿ ಎರಡು ಹಾಡು ಹೇಳಿ ನನ್ನ ಕಲೆಯನ್ನು ಸಾರ್ಥಕ ಪಡಿಸಿಕೊಳ್ಳಬೇಕು ಎಂಬ ಅಭಿಲಾಷೆಯಿದೆ. ಅವಕಾಶ ದೊರೆತರೆ ಅಗತ್ಯವಾಗಿ ಆ ಕೆಲಸ ಮಾಡುತ್ತೇನೆ. ಆದರೆ ಗುರುಗಳು ನನ್ನಂಥ ಪಾಮರರುಗಳಿಗೆ ಆ ಅನುಗ್ರಹವನ್ನು ಕರುಣಿಸುತ್ತಾರೆಯೇ ?"

"ಅಗತ್ಯವಾಗಿ. ಅವರಿರುವುದೇ ನಮ್ಮನಿಮ್ಮಂಥ ಪಾಮರರ ಉದ್ಧಾರಕ್ಕಾಗಿ. ನಾವು ಗುರುಗಳ ಅನುಕೂಲ ತಿಳಿದುಕೊಂಡು ನಿಮಗೆ ತಿಳಿಸುತ್ತೇವೆ."

—ನಾಯಕರು ಹೇಳಿದರು

"ಮಹದುಪಕಾರವಾಯಿತು"

—ಎಂದಳು ಮೆಹರ್‌ಬಾನು, ಅಲ್ಲಿಗೆ ಮಾತು ಮುಗಿಯಿತು ಎಂಬ ರೀತಿಯಲ್ಲಿ ನಾಯಕ—ನಾಗತಿಯರಿಬ್ಬರಿಗೂ ಮುಜುರೆಮಾಡಿ.

"ಇದೇನಿದು — ಎಲ್ಲವೂ ಬರಿ ಬಾಯಿಮಾತಿನಲ್ಲೇ ಮುಗಿಯುವಂತೆ ಕಾಣುತ್ತದಲ್ಲಾ................"

— ನಾಗತಿ, ನಾಯಕರತ್ತ ತಿರುಗಿ ಕೇಳಿದಳು.

"ಅಂದರೆ................"

"ಹಿಂದಿನ ಸಂಗೀತ ಸಭೆಯಾದಾಗ, ನೀವು ಉಡುಗೊರೆ ಕೊಡುತ್ತೇವೆಂದರೂ ಇವರು ತೆಗೆದುಕೊಳ್ಳಲಿಲ್ಲ; ಈ ದಿನ ನಿಮಗೇ ಇವರಿಗೆ ಉಡುಗೊರೆ ಕೊಡುವ ಮನಸ್ಸಿದ್ದಂತಿಲ್ಲ. ಇದಾವ ಸೀಮೆಯ ನ್ಯಾಯ ?"

— ಎಂದು ನಾಗತಿ, ಅದುವರೆಗೂ ಎಲ್ಲರ ಮನಸ್ಸಿನಿಂದ ಮರೆಯಾಗಿ

ಹೋಗಿದ್ದ ಉಡುಗೊರೆಯ ಮಾತನ್ನು ನೆನಪಿಸಿದಳು.

ಆ ಮಾತು ನೆನಪಾಗಿ, ನಾಯಕರ ಮೊಗದಮೇಲೆ ಚಿಂತೆ ಸುಳಿದಂತೆಯೇ, ಮೆಹರ್‌ಬಾನುವಿನ ಮುಖವೂ ಖಿನ್ನವಾಗಿ —

“ ಪ್ರಭುಗಳಿಂದ ಉಡುಗೊರೆ ಪಡೆಯುವ ಭಾಗ್ಯವೇ ನನ್ನ ಹಣೆಯಲ್ಲಿ ಬರೆದಂತಿಲ್ಲ ”

— ಎಂದಳು

“ ಏಕೆ ”

— ನಾಗತಿ ಕೇಳಿದಳು.

“ ಈ ದಿನದ ಸಭೆಯಲ್ಲಿ ಹಾಡಿದ ನನ್ನ ಮನಸ್ಸು ಕೇಳಿದ ಪ್ರಭುಗಳ ಮನಸ್ಸು ಎರಡೂ ಮೆಚ್ಚುವಂತೆ ಹಾಡಿ, ಪ್ರಭುಗಳಿಂದ ನನಗೆ ಬೇಕಾದ ಉಡುಗೊರೆಯನ್ನೇ ಬೇಡಬೇಕೆಂದು ಮಾಡಿದ್ದೆ. ಆದರೆ ಖುದಾ ನನಗೆ ಆ ಅವಕಾಶ ಒದಗಿಸಿಕೊಡಲಿಲ್ಲ. ಬಹುಶಃ ನನ್ನ ಮನಸ್ಸಿನಲ್ಲಿ ಪ್ರಭುಗಳಿಂದ ಕೇಳಬೇಕೆಂದಿದ್ದ ಉಡುಗೊರೆ ‘ಅವನ’ ಮನಸ್ಸಿಗೆ ಬರಲಿಲ್ಲವೆಂದು ಕಾಣುತ್ತದೆ ”

— ಮೆಹರ್‌ಬಾನು ಖಿನ್ನಳಾಗಿ ಹೇಳಿದಳು.

“ ಆಕಸ್ಮಿಕವಾಗಿ ಘಟಿಸಿದ ಅಪರಾಧಕ್ಕೆ ನಾವು ದೈವೀಚಿತ್ತದ ಸ್ವರೂಪವನ್ನು ಕೊಡಬಾರದು. ಅಚಾತುರ್ಯದಲ್ಲಿ ನಮ್ಮದೂ ಪಾಲಿದೆ ಎಂದು ನಾವಾಗಲೇ ಹೇಳಲಿಲ್ಲವೇ ? ”

“ ಹಾಗಲ್ಲ ಪ್ರಭು, ಸಭೆಗೆ ಯಾರನ್ನೂ ಆಹ್ವಾನಿಸುವ ಅಧಿಕಾರ ನಿಮಗಿದೆ. ಆದರೆ ನನ್ನ ಚಿತ್ತದ ಮೇಲೆ ಹತೋಟಿಯನ್ನಿಟ್ಟುಕೊಳ್ಳಲಾರದೇ ಹೋದದ್ದು ನನ್ನ ತಪ್ಪು.”

“ ನಾವೂ ಒಂದು ಮಾತು ಕೇಳಬಹುದೋ ? ”

— ಅವರಿಬ್ಬರ ಮಾತಿನ ನಡುವೆ ಪ್ರವೇಶಿಸಿ ಕೇಳಿದಳು ನಾಗತಿ

“ ಕೇಳಿ ”

“ ನೀವು ಇದ್ದಕ್ಕಿದ್ದ ಹಾಗೇ ಸಿಟ್ಟಾದುದು. ನಿಮ್ಮ ಮಾತು ಕೇಳಿ ಆತ — ಆತ ಯಾರೋ ನನಗೆ ತಿಳಿಯದು — ಅಲ್ಲಿಂದ ಹೊರಟುಹೋದುದು ಅಷ್ಟು ನನಗೆ ತಿಳಿಯಿತು. ಆದರೆ ನೀವು ಸಿಟ್ಟಾಗುವಂಥ ಕೆಲಸ ಆತ ಏನ ಮಾಡಿದ ಎಂಬುದು ಮಾತ್ರ ತಿಳಿಯಲಿಲ್ಲ. ಏನಾಯಿತು ?”

ನಾಗತಿಯ ಪ್ರಶ್ನೆಯನ್ನು ಕೇಳಿ, ಅದಕ್ಕೆ ಮೆಹರ್‌ಬಾನು ಏನು ಉತ್ತರ ಹೇಳುವಳೋ ಎಂದು ನಾಯಕರ ಕಿವಿಯೂ ಚುರುಕಾಯಿತು.

ಆ ವಿದೇಶಿ, ತಾನು ಹಾಡುವಾಗ, ತನ್ನನ್ನೇ ಕಂಬನಿ ತುಂಬಿದ ಕಣ್ಣುಗಳಿಂದ ದುರುಗುಟ್ಟಿಕೊಂಡು ನೋಡುತ್ತಿದ್ದುದನ್ನು ನೋಡಿದಾಗ ಮೆಹರ್‌ಬಾನುವಿಗೆ ಅದು ಅಸಹ್ಯ ಅಸಭ್ಯತೆ ಎಂದೇ ತೋರಿ ಸಿಟ್ಟು ಬಂದಿತ್ತು. ಈಗ– ನಾಗತಿಯ ಪ್ರಶ್ನೆಗೆ ಉತ್ತರ ಹೇಳುವ ಹೊತ್ತಿನಲ್ಲಿ ‘ ಅದು ಅಂಥ ಅಪರಾಧವೇ ? ನನ್ನ ಉದ್ರೇಕವೇ ಹೆಚ್ಚಿನ ಅಸಭ್ಯತೆಯಾಗಲಿಲ್ಲವೇ ?’ ಎನಿಸಿ ಒಂದು ಕ್ಷಣಕಾಲ ಏನೂ ಉತ್ತರ ಕೊಡದೆ ಯೋಚಿಸಿದ ಬಳಿಕ —

“ ಅದಕ್ಕೂ ನನ್ನ ದುಡುಕುತನವೇ ಕಾರಣವೆಂದು ತೋರುತ್ತದೆ. ಆತ ಅಂಥ ಮಾಡಬಾರದ ಕುಹಕತನವನ್ನೇನೂ ಮಾಡಲಿಲ್ಲ. ಆದರೂ ಆತ ನನ್ನತ್ತ ರೆಪ್ಪೆ ಹೊಡೆಯದಂತೆ ನೋಡಿದಾಗ ತಡೆಯಲಿಲ್ಲ ”

— ಎಂದು ಹೇಳಿದಳು.

“ ಹಾಗಿದ್ದರೆ ತಕ್ಕದ್ದೇ ಆಯಿತು. ಪರಸ್ತ್ರೀಯನ್ನು ಹಾಗೆ ನೋಡುವುದು ಎಲ್ಲಿಯ ಸಭ್ಯಾಚಾರ ? ”

— ಮೆಹರ್‌ಬಾನು ಮಾಡಿದ ಕೆಲಸಕ್ಕೆ ತನ್ನ ಸಂಪೂರ್ಣ ಸಮ್ಮತಿ ನೀಡಿ ಹೇಳಿದಳು ನಾಗತಿ.

“ ಆತನದು ಸಭ್ಯಾಚಾರವೋ, ಅಸಭ್ಯಾಚಾರವೋ ನಾನೀಗ ಏನೂ ಹೇಳಲಾರೆ. ಆತನ ಕಣ್ಣಿನಲ್ಲಿದ್ದ ಕಂಬನಿಗೆ, ಕಾಮುಕ್ಕಿಂತ ಬೇರೆ ಕಾರಣ ಇದ್ದಿತೇನೋ ಅನಿಸುತ್ತದೆ ನನಗೀಗ. ಏನು ವ್ಯಥೆ ಮರುಕಳಿಸಿತೋ, ಏನು ದುಃಖ ಉರಿದೆದ್ದಿತೋ — ಯಾವುದನ್ನೂ ಯೋಚಿಸದೆ ಅಪಮಾನ ಮಾಡಿದೆ. ಅದನ್ನು ನೆನಸಿಕೊಂಡಾಗ ನನ್ನದೇ ಅಸಭ್ಯತೆಯಾಯಿತೆಂದು ತೋರುತ್ತದೆ. ಯಾರೋ, ಎಲ್ಲಿಯವನೋ — ಪಾಪ ! ”

— ಪಶ್ಚಾತಾಪ ತುಂಬಿದ ಧ್ವನಿಯಲ್ಲಿ ಹೇಳಿದಳು ಮೆಹರ್‌ಬಾನು.

“ ಯಾರೋ, ಎಲ್ಲಿಯವನೋ — ಅಂದರೆ ನಿಮಗೆ ಆತ ಅಪರಿಚಿತನೇ ? ”

— ನಾಯಕರು ಕೇಳಿದರು.

“ ಅಹುದು. ”

“ ನಿಜವಾಗಿಯೂ.............”

— ಆಕೆಯ ಮಾತನ್ನು ನಂಬದಂತೆ ಕೇಳಿದರು ನಾಯಕರು.

"ನಿಜವಾಗಿಯೂ, ಏಕೆ ?"

—ನಾಯಕರ ಪ್ರಶ್ನೆಯೇ ಅರ್ಥವಾಗದಂತೆ ಕೇಳಿದಳು ಮೆಹರ್‌ಬಾನು.

"ನೀವು ಬಿಜಾಪುರದವರಲ್ಲವೇ ?"

"ಹೌದು"

"ಹಾಗಿದ್ದರೆ ನಿಮಗೆ ಆತನ ಪರಿಚಯವಿಲ್ಲದಿರುವುದು ಆಶ್ಚರ್ಯಕರ ವಿಷಯ !......"

"ಏಕೆ ?"

"ಆತನೂ ಬಿಜಾಪುರದಿಂದ ಇಲ್ಲಿಗೆ ಬಂದವನೇ. ನಾವೇನೋ ನಿಮಗೂ ಆತನಿಗೂ ಪೂರ್ವಪರಿಚಯವಿರಬೇಕು. ಆದರಿಂದಲೇ ಏನೋ ಕಾರಣಕ್ಕಾಗಿ ಆತ ಸಭೆಯಲ್ಲಿದ್ದುದು ನಿಮಗೆ ಸಹ್ಯವಾಗಲಿಲ್ಲ ಎಂದು ಭಾವಿಸಿದ್ದೆವು."

"ಊಹೂ............ಆತನನ್ನು ನಾನು ಜೀವನದಲ್ಲಿ ಕಂಡುದು ಇದೇ ಮೊದಲ ಬಾರಿ........ಆತನೂ ಬಿಜಾಪುರದವನೇ ? ಯಾರಾತ ? ಇಲ್ಲಿಗೇಕೆ ಬಂದ ?"

— ಎಂದು ದಿಗ್ಭ್ರಾಂತಳಾಗಿ ಕೇಳಿದಳು ಮೆಹರ್‌ಬಾನು.

ಆಕೆಯ ಪ್ರಶ್ನೆಗೆ ಕೂಡಲೇ ಉತ್ತರ ಕೊಡದೆ, ಪರೀಕ್ಷಕ ದೃಷ್ಟಿಯಿಂದ ಮೌನವಾಗಿ ಒಂದು ಕ್ಷಣ ಕಾಲ ಆಕೆಯ ಮುಖವನ್ನು ನೋಡಿ ಬಳಿಕ ಮೌನವನ್ನು ಮುರಿದು, ಅದೇ ನೋಟದಿಂದಲೇ ಆಕೆಯತ್ತ ನೋಡುತ್ತಾ ನಾಯಕರು, ಜಾರ್ಜ್ ಡ್ಯೂಪೋರೋನ ಜೀವನ ವೃತ್ತಾಂತವನ್ನೆಲ್ಲಾ ಹೇಳಿದರು. ಅದನ್ನು ಕೇಳಿ ಮೊಟ್ಟ ಮೊದಲ ಬಾರಿಗೆ ಜಾನನ ಕಥೆ ಕೇಳಿದ ನಾಗತಿಯೂ ಭಾರವಾಗಿ ನಿಟ್ಟುಸಿರಿಟ್ಟು—

"ಅಯ್ಯೋ ಪಾಪ !"

—ಎಂದರು.

ನಾಯಕರು ಹೇಳಿದುದನ್ನು ಕೇಳಕೇಳುತ್ತಾ ಮೆಹರ್‌ಬಾನುವಿನ ಕಣ್ಣಲ್ಲಿ ಹನಿತುಂಬಿ —

"ಎಷ್ಟು ದುಃಖ ಅನುಭವಿಸದ ಜೀವ ? ನನ್ನಿಂದ ಆ ನೊಂದ ಜೀವಕ್ಕೆ ಎಂಥ ಅಪಚಾರವಾಯಿತು ?"

— ಎಂದು ಮುಮ್ಮಲ ಮರುಗಿ –

" ಈಗ.... ಈಗ.... ಆತನ ಕ್ಷಮೆ ಬೇಡುವುದಕ್ಕೂ ಅವಕಾಶವಿಲ್ಲ. ನನ್ನ ಪರವಾಗಿ ಪ್ರಭುಗಳು ಆತನಿಗೆ ನನ್ನ ಕ್ಷಮಾಯಾಚನೆಯನ್ನು ತಿಳಿಸಬೇಕು."

— ಎಂದು ಬೇಡಿದಳು.

" ಆಯಿತು. ಆತನನ್ನು ಕಂಡಾಗ ತಿಳಿಸುತ್ತೇವೆ."

— ಎಂದು ನಾಯಕರು –

" ಅದೆಲ್ಲಾ ಆಯಿತಲ್ಲಾ – ನಿಮಗೆ ನಮ್ಮಿಂದ ಬೇಕಾದ ಉಡುಗೊರೆ ಏನೆಂಬುದನ್ನೇ ತಿಳಿಸಲಿಲ್ಲವಲ್ಲಾ ? "

—ಎಂದು ಮತ್ತೆ ಮೊದಲಿನ ವಿಷಯಕ್ಕೆ ಬಂದು ಪ್ರಶ್ನೆ ಮಾಡಿದರು.

" ಅದನ್ನು ಕೇಳುವ ಅರ್ಹತೆಯನ್ನೇ ನಾನು ಕಳೆದುಕೊಂಡಿದ್ದೇನಲ್ಲಾ"

" ಅದರ ಚಿಂತೆ ನಿಮಗೆ ಬೇಡ ಅಚಾತುರ್ಯದ ಹೊಣೆಗಾರಿಕೆ ನಿಮ್ಮದಲ್ಲ. ನಿಮಗೆ ಏನು ಬೇಕೋ ಕೇಳಿ. ಅದನ್ನು ಕೊಡಿಸಿಕೊಡುವ ಹೊಣೆಗಾರಿಕೆ ನನಗಿರಲಿ. ಸಂಗೀತವೆಂದರೇನು ? ಚೀಲಕ್ಕಿಷ್ಟು ಎಂದು ತೂಗುವ ಹುಣಿಸೆ ಹಣ್ಣಲ್ಲ."

—ನಾಗತಿಯೇ ಹೇಳಿದಳು.

" ಇನ್ನೇನು — ನಿಮಗೇನು ಬೇಕೋ ನಿಶ್ಚಿಂತರಾಗಿ ಕೇಳಿ. ಅಂತಃಪುರದಲ್ಲಿ ನಾಗತಿಯರದೇ ಸರ್ವಾಧಿಕಾರ. ಇಲ್ಲಿ ಅವರ ಮಾತಿಗೆ ಯಾರೂ ಇದಿರಾಡುವಂತಿಲ್ಲ. ನಿಮಗೇನು — ಅರಮನೆಯಲ್ಲಿರುವ ಅಥವಾ ನಮ್ಮ ಅಧಿಕಾರದಲ್ಲಿರುವ ಯಾವ ವಸ್ತು ನಿಮಗೆ ಬೇಕೆನಿಸಿದರೂ ಅದು ನಿಮ್ಮದು."

ನಾಗತಿಯೊಂದಿಗೆ ಧ್ವನಿಕೂಡಿಸಿ ಕೇಳಿದರು ನಾಯಕರು.

" ಆದರೆ ನಾನು ಬೇಡ ಬಯಸಿದುದು ಧನಕನಕ ವಸ್ತುವಾಹನ ಯಾವುದೂ ಅಲ್ಲ "

" ಮತ್ತೇನು "

" ನಾನು ಬೇಡಿದುದನ್ನು ಕೊಡುವ ಮನಸ್ಸಿದ್ದರೆ, ನಾನು ನಿಮ್ಮಿಂದ ಬೇಡುವುದು ನಿಮ್ಮ ಸ್ನೇಹಹಸ್ತ ! "

" ಅಂದರೆ "

— ನಾಯಕ ನಾಗತಿಯರಿಬ್ಬರೂ ತಟಕ್ಕನೆ ಕೆಂಡತುಳಿದಂತೆ ಬೆಚ್ಚಿ ಕೇಳಿದರು.

" ನನ್ನ ಮಾತನ್ನು ತಾವು ತಪ್ಪು ತಿಳಿಯಬಾರದು...............ನಾನು ಬಯಸಿದುದು.....................ಸಾಮಾನ್ಯವಾಗಿ ಊಹಿಸಬಹುದಾದ ಆರ್ಥಿಕ ಸ್ನೇಹವಲ್ಲ. "

" ಮತ್ತೆ "

" ಸೀರ್ಯದ ದಿವಾನ್ ಫೌಜುದಾರ್ ಖಾಸಿಂಖಾನರ ದೂತಿಯಾಗಿ ಅವರ ಪರವಾಗಿ ತಮ್ಮ ಸ್ನೇಹವನ್ನು ಯಾಚಿಸುತ್ತೇನೆ. ತಾವು ಅವರ ಮಿತ್ರ ರಾಗುತ್ತೇವೆಂದು ನನಗೆ ಮಾತುಕೊಟ್ಟರೆ ಸಾಕು......... ಅಷ್ಟೆ........ನಾನು ನಿಮ್ಮಿಂದ ಬೇಡುವುದು........... "

ಇದ್ದಕ್ಕಿದ್ದ ಹಾಗೇ ಮಾತು ರಾಜಕೀಯದತ್ತ ತಿರುಗಿದುದನ್ನು ಕಂಡು ನಾಗತಿಗೆ ಬಾಯಿ ಕಟ್ಟಿದಂತಾಗಿ, ನಾಯಕರ ಮುಖ ಗಡುಸಾಗಿ,

" ನಿಮಗೂ ರಾಜಕೀಯಕ್ಕೂ ಸಂಬಂಧವಿಲ್ಲವೆಂದುಕೊಂಡಿದ್ದೆವು ನಾವು"

— ಎಂದರು.

" ನಿಜ, ಜಹಾಪನಾ. ನನಗೂ ರಾಜಕೀಯಕ್ಕೂ ಸಂಬಂಧವಿಲ್ಲ "

" ಹಾಗೆಂದರೆ ಈ ಬೇಡಿಕೆಯ ಅರ್ಥವೇನು ? "

" ನನ್ನ ಮಾತನ್ನು ಲಾಲಿಸಲು ಪ್ರಭುಗಳಿಗೆ ಅವಕಾಶವಿರುವುದಾದರೆ ವಿವರಿಸುತ್ತೇನೆ "

" ಹೇಳಿ "

ನಾಯಕರ ಪ್ರಶ್ನೆಗೆ ಉತ್ತರವಾಗಿ ಮೆಹರ್‌ಬಾನು, ತಾನು ಸೀರ್ಯಕ್ಕೆ ಬಂದು ಖಾಸಿಂಖಾನರನ್ನು ಕಂಡದ್ದು, ಅಲ್ಲಿ ಆತ ತನ್ನ ಬಗ್ಗೆ ತೋರಿದ ಅಪ್ರತಿಮ ವಿಶ್ವಾಸ, ಅಲ್ಲಿಂದ ದುರ್ಗಕ್ಕೆ ಜುಲ್‌ಫಿಕಾರ್‌ಖಾನನ ನಿಯೋಗ ದೊಂದಿಗೆ ಬಂದದ್ದು, ಜುಲ್‌ಫಿಕಾರ್‌ಖಾನನ ನಿಯೋಗ ವಿಫಲವಾದ ಬಳಿಕ, ಆತ ತನ್ನೊಂದಿಗೆ ಆಡಿದ ಮಾತುಕಥೆ, ಎಲ್ಲವನ್ನೂ ಕೂಲಂಕಶವಾಗಿ ವಿವರಿಸಿ—

"ಇದು ಸತ್ಯವಾದ ಸಂಗತಿ ಜಹಾಪನಾ. ಸೌಂದರ್ಯದ ಆರಾಧಕಳಾಗಿ, ನಾನು ನಿಮ್ಮಿಂದ ಸ್ನೇಹ ಯಾಚನೆ ಮಾಡುತ್ತಿದ್ದೇನೆ. ರಾಜಕಾರಿಣಿಯಾಗಿ ಯಾಗಲಿ, ಗೂಢಚಾರಿಣಿಯಾಗಿಯಾಗಲಿ ಅಲ್ಲ. ದಿವಾನ್ ಫೌಜುದಾರರೂ ನಿಮ್ಮಷ್ಟೇ ಕಲಾಭಿಮಾನಿಗಳು. ಆದರೆ, ಅವರು ಇಂದಿನ ಪದವಿಯಲ್ಲಿ ಉಳಿಯುವುದು – ಬಿಡುವುದು ಇಂದು ದುರ್ಗದವರ ಸ್ನೇಹಾಸ್ನೇಹವನ್ನು ಅವಲಂಬಿಸಿದೆ. ಈ ಒಂದೇ ಕಾರಣಕ್ಕಾಗಿ, ನಾನು ನಿಮ್ಮಲ್ಲಿ ಈ ಪ್ರಾರ್ಥನೆ

ಮಾಡುತ್ತಿದ್ದೇನೆ. ನೆರೆಹೊರೆಯ ಈ ಎರಡು ಅಧಿಕಾರಿಗಳಲ್ಲಿ ಸ್ನೇಹ ನೆಲಸಿ ಇಲ್ಲಿಯ ಜನ ಸುಖ ಶಾಂತಿಯಿಂದ ಬಾಳಬೇಕೆಂಬುದೇ ನನ್ನ ಮನೀಷೆ. ಅಷ್ಟನ್ನು ಪ್ರಭುಗಳು ನಡೆಸಿ ಕೊಡಬೇಕು "

ಎಂದು ಬೇಡಿದಳು ಮೆಹರ್‌ಬಾನು.

" ಒಂದು ಮಾತು — ನಿಮಗೆ ಎಲ್ಲಾ ವಿಷಯವೂ ತಿಳಿದಿದೆಯೋ ಇಲ್ಲವೋ ? "

" ತಿಳಿಯದಿದ್ದುದನ್ನು ತಿಳಿಸಿ. "

" ಸೀರ್ಯದವರು ನಮ್ಮಿಂದ ಬಯಸುವುದು ಸ್ನೇಹವನ್ನಲ್ಲ — ಸಾಮಂತಿಕೆಯನ್ನು. ಇದು ನಿಮಗೆ ತಿಳಿದಿದೆಯೇ ? ಸ್ನೇಹ – ಸಹಕಾರಗಳನ್ನು ಯಾರಿಗೂ ನೀಡುವುದಕ್ಕೆ ದುರ್ಗ ಸಿದ್ಧವಾಗಿದೆ. ಆದರೆ ಯಾರ ಅಧಿಕಾರಕ್ಕೂ ತಲೆಬಾಗಲು ಸಿದ್ಧವಾಗಿಲ್ಲ. ನಮ್ಮಿಂದ ಸ್ನೇಹವನ್ನು ಬೇಡದೆ ಕಪ್ಪಕಾಣಿಕೆಯನ್ನು ಕೇಳಿದುದಕ್ಕಾಗಿಯೇ ಸೀರ್ಯದ ವಕೀಲರು ಬರಿಗೈಯಿಂದ ಹಿಂತಿರುಗಬೇಕಾಯಿತು. "

" ಇರಬಹುದು. ಆದರೆ ನನ್ನ ಬೇಡಿಕೆಯಲ್ಲಿ ಆ ಬಗೆಯ ಯಾವ ಅಭಿಪ್ರಾಯವೂ ಇಲ್ಲ. ಬೇರೆಯ ಭಾವನೆಯಿದ್ದರೆ ನಾನು ಹೀಗೆ ತಮ್ಮಲ್ಲಿ ಬೇಡುತ್ತಿರಲಿಲ್ಲ. ದಿವಾನ್ ಫೌಜುದಾರರ ಸೋದರಿಯಾಗಿ, ಅಂತೇ ನಿಮ್ಮ ಬೆನ್ನಲ್ಲಿಬಿದ್ದ ಭಗಿನಿಯಾಗಿ ಬೇಡುತ್ತಿದ್ದೇನೆ. ನಿಮ್ಮೀರ್ವರ ಶತ್ರುತ್ವದಿಂದ ಕೊಲೆಯಾಗಿ ಹೋಗಬಹುದಾದ ಸಾವಿರಾರು ನಿರಪರಾಧಿ ಜನಗಳ ರಾಯಭಾರಿಯಾಗಿ ನಿಮ್ಮನ್ನು ಪ್ರಾರ್ಥಿಸುತ್ತಿದ್ದೇನೆ. ಈ ಮೈತ್ರಿಯ ಬೇಡಿಕೆಯನ್ನು ನಡೆಸಿಕೊಡಿ.

—ಕಳಕಳಿ ತುಂಬಿದ ಧ್ವನಿಯಲ್ಲಿ ಬೇಡಿದಳು ಮೆಹರ್‌ಬಾನು.

" ಅಂತೂ ನಮ್ಮನ್ನು ನಿಮ್ಮ ಸೋದರನೆಂದು ಕರೆದು, ನಮ್ಮ ಬಾಯಿ ಕಟ್ಟಿಸುತ್ತಿದ್ದೀರಿ, ಬಾನು ಸಾಹಿಬಾ........ಹೆಣ್ಣಿನ ಬೇಡಿಕೆಗೆ ' ಇಲ್ಲ ' ವೆಂದ ಅಭ್ಯಾಸವೇ ಇಲ್ಲ ದುರ್ಗದ ಸಿಂಹಾಸನಕ್ಕೆ- ಆದರೆ ನನಗೊಂದೇ ಚಿಂತೆ."

" ಏನು ?"

" ನೀವು ರಾಜಕಾರಣದ ವಕ್ರವಿನ್ಯಾಸವನ್ನು ಅರಿಯದವರು. ಎಂತಲೇ ನಿಮ್ಮ ಮುಗ್ಧ ಬೇಡಿಕೆಗೆ ಏನು ಹೇಳಬೇಕೆಂದೇ ನಮಗೆ ತೋಚದಾಗಿದೆ."

" ಏಕೆ ?"

"ನಿಮ್ಮ ಯುದ್ಧದ ಬಗ್ಗೆ ದ್ವೇಷ, ಶಾಂತಿಯ ಬಗ್ಗೆ ಅಗಾಧ ಪ್ರೇಮವನ್ನು ನಾವು ಅರ್ಥ ಮಾಡಿಕೊಳ್ಳಬಲ್ಲೆವು. ಶಾಂತಿಯ ಬಗ್ಗೆ ನಿಮಗಿರುವಷ್ಟು ಪ್ರೇಮವೇ ನಮಗೂ ಇದೆ. ಆದರೂ ನಮ್ಮ ಕೈಯಲ್ಲಿರುವುದು ಚಿತ್ರದುರ್ಗದ ಪವಿತ್ರ ಕೀರ್ತಿಯನ್ನು ರಕ್ಷಿಸುವ ಖಡ್ಗವೇ ಹೊರತು, ಕಟುಕರ ಕೈಗತ್ತಿಯಲ್ಲ. ಆದರೆ ಶಾಂತಿ ನಮ್ಮೊಬ್ಬರ ಬಯಕೆಯಿಂದ ಲಭ್ಯವಾಗುವಂಥಹುದಲ್ಲ; ನಮ್ಮಂತೆಯೇ ನಮ್ಮ ಇದಿರು ನಿಂತವರೂ ಕೈ ಚಾಚದಿದ್ದಲ್ಲಿ ನಮ್ಮ ಸ್ನೇಹ ಹಸ್ತಕ್ಕೆ ಏನೂ ಬೆಲೆ ಬರುವುದಿಲ್ಲ, ಅಲ್ಲವೆ ?"

"ನಿಜ."

"ಆದುದರಿಂದ, ನಮ್ಮಂತೆಯೇ ನಿಮ್ಮ ಸೀರ್ಯದ ಸಹೋದರರೂ ಸ್ನೇಹಕಾತುರರಾಗಿದ್ದಾರೇನೋ ವಿಚಾರಿಸಿ. ಅವರಿಗೆ ದುರ್ಗದವರ ಮೈತ್ರಿಯೊಂದೇ ಅಗತ್ಯವಾಗಿದ್ದಲ್ಲಿ, ಅದಕ್ಕಿಂತ ಹೆಚ್ಚಿನ ಆಕಾಂಕ್ಷೆ ಸೀರ್ಯದವರಿಗೆ ಇಲ್ಲವಾದಲ್ಲಿ, ನೀವು ಬಯಸಿದ ಸ್ನೇಹವನ್ನು ನೀಡಲು ನಾವು ಸದಾ ಸಿದ್ಧವಾಗಿದೇವೆ. ಈ ವಿಷಯವನ್ನು ಸೀರ್ಯದವರಿಗೆ ತಿಳಿಸಿ, ಅವರ ಅಭಿಪ್ರಾಯವನ್ನು ತಿಳಿದು ನಮಗೆ ಹೇಳಿ."

—ಎಂದರು ನಾಯಕರು.

"ಅವರು ಒಪ್ಪುವುದು ಬಿಡುವುದು ನನಗೆ ಅಗತ್ಯವಲ್ಲ ಪ್ರಭು. ನಾನು ಅವರಿಗೆ ಕೊಟ್ಟ ಮಾತನ್ನು ನಡೆಸಬೇಕೆಂದು ಬೇಡುತ್ತಿದ್ದೇನೆ. ನಿಮ್ಮ ಸ್ನೇಹವನ್ನು ಉಳಿಸಿಕೊಳ್ಳುವುದು ಬಿಡುವುದು ಅವರಿಗೆ ಸೇರಿದ್ದು."

"ಒಂದು ವೇಳೆ ಅವರು ನಮ್ಮ ಸ್ನೇಹವನ್ನು ನಿರಾಕರಿಸಿ, ಯುದ್ಧವನ್ನೇ ಬಯಸಿದರೆ........"

"ನನಗೆ ಸ್ನೇಹವಚನ ಕೊಟ್ಟ ಮಾತ್ರಕ್ಕೆ ನಿಮ್ಮ ಖಡ್ಗಕ್ಕೇನೂ ತುಕ್ಕು ಹಿಡಿಯುವುದಿಲ್ಲವಲ್ಲ ?........"

"ಹಾಗಿದ್ದರೆ ಅಗತ್ಯವಾಗಿ ಆಗಬಹುದು. ನಾವು ಅವರಿಗೆ ಯಾವುದೇ ಸಮಯದಲ್ಲೂ, ದುರ್ಗದ ಘನತೆಗೆ ಚ್ಯುತಿ ಬರದಂತೆ ಸ್ನೇಹವನ್ನು ಕೋರಲು ಸಿದ್ಧರಾಗಿದ್ದೇವೆಂದು ತಿಳಿಸಿ."

"ಜುಲ್‌ಫಿಕಾರ್ ಖಾನರು ವಿಫಲರಾಗಿ ಹೋದಬಳಿಕ, ನಾನು ಬರಿ ಬಾಯಿ ಮಾತಿನಲ್ಲಿ ಈ ಮಾತನ್ನು ಹೇಳಿದರೆ, ದಿವಾನ್ ಫೌಜುದಾರರು ನನ್ನ ಮಾತನ್ನು ನಂಬದೇ ಹೋಗಬಹುದು. ಆದುದರಿಂದ ತಾವು

ದಯವಿಟ್ಟು ಈ ಬಗ್ಗೆ ರಾಜಪತ್ರವೊಂದನ್ನು ಕೊಡಿಸಿಕೊಟ್ಟಲ್ಲಿ ಮಹದನುಗ್ರಹವಾಗುತ್ತದೆ."

"ಆಯಿತು. ಹಾಗೇ ಆಗಲಿ. ಈಗ ನಿಮ್ಮ ಮನಸ್ಸಿಗೆ ತೃಪ್ತಿಯಾಯಿತೆ ?"

"ಕೃತಾರ್ಥಳಾದೆ ಖಾವಿಂದ್."

—ಎಂದು ನಾಯಕರಿಗೆ ಮಣಿದು ಹೇಳಿದಳು ಮೆಹರ್‌ಬಾನು—

"ಇನ್ನು ನಮಗೆ ಬಿಡಾರಕ್ಕೆ ಹಿಂದಿರುಗಲು ಅಪ್ಪಣೆಯೆ ?"

"ಉಡುಗೊರೆ ತೆಗೆದುಕೊಂಡು ಹೋಗಿ."

—ಎಂದಳು, ಅದುವರೆಗೂ ಅವರ ಮಾತಿನಲ್ಲಿ ಬೆರೆಯದಿದ್ದ ನಾಗತಿ.

"ಆಯಿತಲ್ಲಾ — ಬಯಸಿದ ಉಡುಗೊರೆಯನ್ನೇ ಪ್ರಭುಗಳು ನೀಡಿದಾರೆ."

"ಅದು ಅವರದಾಯಿತು. ನಮ್ಮ ಮೆಚ್ಚು ಕಾಣಿಕೆಯನ್ನು ನಾವು ಕೊಡದಿದ್ದರೆ ನಮ್ಮ ಮನಸ್ಸಿಗೆ ತೃಪ್ತಿಯಾಗುವುದೆಂತು ?"

—ಎಂದು ಹೇಳಿ ದೂರದಲ್ಲಿದ್ದ ದಾಸಿಯನ್ನು ಕೈಸನ್ನೆಯಿಂದ ಕರೆದು, ಮೊದಲೇ ಸಜ್ಜುಗೊಳಿಸಿದ್ದ ಉಡುಗೊರೆಯ ಹರಿವಾಣವನ್ನು ತರುವಂತೆ ತಿಳಿಸಿದಳು.

ನಾಗತಿಯವರ ಬಯಕೆಯನ್ನು ನಿರಾಕರಿಸಲಾಗದೆ, ಆಕೆ ನೀಡಿದ ಉಡುಗೊರೆಯನ್ನು ಸ್ವೀಕರಿಸಿ, ಮೆಹರ್‌ಬಾನು ಅರಮನೆಯಿಂದ ಹೊರಬಿದ್ದು ತನಗಾಗಿ ಕಾದಿದ್ದ ಮೇನೆಯಲ್ಲಿ ಕುಳಿತು ತನ್ನ ಬಿಡಾರಕ್ಕೆ ಹಿಂದಿರುಗಿದಳು.

ಮರುದಿನ —

ತಾನು ಹೊತ್ತ ಕರ್ತವ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ ತೃಪ್ತಿಯಿಂದ ತನ್ನ ಮುಂದಿನ ಕಾರ್ಯಕ್ರಮದ ಬಗ್ಗೆ ಮೆಹರ್‌ಬಾನು ಮಾತನಾಡುತ್ತಾ ಕುಳಿತಿರುವಾಗ, ದಾಸಿಯೊಬ್ಬಳು ಬಂದು —

'ಬಾನುಸಾಹಿಬಾ, ತಮ್ಮನ್ನು ಕಾಣಲು ಯಾರೋ ಬಂದಿದ್ದಾರೆ'

— ಎಂದು ತಿಳಿಸಿದಳು.

ಆ ದಿನ ಯಾರ ಭೇಟಿಯನ್ನೂ ನಿರೀಕ್ಷಿಸದಿದ್ದ ಮೆಹರ್‌ಬಾನುವಿಗೆ ದಾಸಿಯ ಮಾತನ್ನು ಕೇಳಿ ಆಶ್ಚರ್ಯವಾಯಿತು. ಯಾರಿರಬಹುದು ಎಂದು ಯೋಚಿಸುತ್ತಲೇ, ತನ್ನ ಯೋಚನೆಯನ್ನೇ ಬಾಯಿಬಿಟ್ಟು ಆಡಿದಂತೆ —

" ಯಾರದು ? "

— ಎಂದು ಕೇಳಿದಳು

' ಯಾರೆಂದು ನನಗೆ ತಿಳಿಯದು. ಯಾರೋ ಅಪರಿಚಿತ ವ್ಯಕ್ತಿ. " ಒಂದೇ ಒಂದು ಕ್ಷಣಕಾಲ ಮೆಹರ್‌ಬಾನು ಸಾಹಿಬಾರನ್ನು ಕಾಣಬೇಕಾದ ಕೆಲಸವಿದೆ. ಅವರ ಅನುಕೂಲ ತಿಳಿದು ಬನ್ನಿ ' ಎಂದು ಹೇಳಿದರು. ' ವಿಚಾರಿಸಿ ಬರುತ್ತೇನೆ ' ಎಂದು ಹೇಳಿ ಬಂದೆ "

ದಾಸಿ ಹೇಳಿದುದನ್ನು ಕೇಳಿ, ಮೆಹರ್‌ಬಾನು ಅಪರಿಚಿತರನ್ನು ತಾನು ನೋಡಬಹುದೋ ಕೂಡದೋ ಎಂಬ ಪ್ರಶ್ನೆ ಕೇಳುವ ರೀತಿಯಲ್ಲಿ ತನ್ನ ತಾಯಿಯತ್ತ ನೋಡಿದಳು.

" ಯಾರೋ, ಏನು ಕೆಲಸವೋ — ಬರಲಿ "

— ಎಂದು ಮೆಹರ್‌ಬಾನುವಿಗೆ ಹೇಳಿ,

" ಅವರನ್ನು ಕರೆತಂದು ದಿವಾನ್‌ಖಾನೆಯಲ್ಲಿ ಕೂಡಿಸು "

— ಎಂದು ದಾಸಿಗೆ ಹೇಳಿದಳು ಮೆಹರ್‌ಬಾನುವಿನ ತಾಯಿ.

" ಹೂಂ. ಹಾಗೆ ಮಾಡು "

— ಎಂದು, ತಾಯಿಯ ಮಾತನ್ನೇ ಮಾರ್ದನಿಸಿದಂತೆ ಹೇಳಿದಳು ಮೆಹರ್‌ಬಾನು.

ಆ ಅಪ್ಪಣೆಯನ್ನು ಪಡೆದ ದಾಸಿ, ಹೊರಗೆ ಹೋಗಿ, ಅನತಿ ಕಾಲದಲ್ಲಿಯೇ ಹಿಂದಿರುಗಿಬಂದು, ಆಕೆಯ ಮಾತಿನಂತೇ ಅಪರಿಚಿತ ವ್ಯಕ್ತಿಯನ್ನು ದಿವಾನ್‌ಖಾನೆಗೆ ಕರೆತಂದು ಕೂಡಿಸಿರುವುದಾಗಿ ಹೇಳಿದಳು.

' ಯಾರಿರಬಹುದು, ಆತನಿಗೆ ತನ್ನ ಬಳಿ ಏನು ಕೆಲಸವಿರಬಹುದು ! ಎಂದು ಯೋಚಿಸುತ್ತಲೇ, ತನ್ನ ತಾಯಿಯನ್ನು ಮುಂದಿಟ್ಟುಕೊಂಡು ಮೆಹರ್‌ಬಾನು ದಿವಾನ್‌ಖಾನೆಯನ್ನು ಪ್ರವೇಶಿಸಿದಳು.

ಅವಳು ದಿವಾನ್‌ಖಾನೆಯನ್ನು ಪ್ರವೇಶಿಸುತ್ತಿದ್ದಹಾಗೆ —

ಆಕೆಯನ್ನು ಕಂಡು ಎದ್ದುನಿಂತ ವ್ಯಕ್ತಿಯನ್ನು ಕಂಡು ಮೆಹರ್‌ಬಾನುವಿಗೆ ಮಿಂಚನ್ನು ಮುಟ್ಟಿದಂತಾಗಿ, ಒಂದು ಕ್ಷಣಕಾಲ ಹಾಗೇ ನಿಂತುಬಿಟ್ಟಳು.

ಯಾರ ಆಗಮನವನ್ನು ಆಕೆ ಕನಸುಮನಸ್ಸಿನಲ್ಲಿಯೂ ನಿರೀಕ್ಷಿಸಿರಲಿಲ್ಲವೋ, ಆ ವಿದೇಶಿ — ಜಾರ್ಜ್ ಡ್ಯುವೋರೋ — ಆಕೆ ಬರುವುದನ್ನೇ ಕಾಯುತ್ತಾ ಕುಳಿತಿದ್ದ !

ಬಾಗಿಲ ಬಳಿಯಲ್ಲಿ ಮೆಹರ್‌ಬಾನುವನ್ನು ಕಾಣುತ್ತಿದ್ದ ಹಾಗೇ, ಜಾನ್, ಆಸನದಿಂದ ಮೇಲೆದ್ದು ನಿಂತು, ಮೆಹರ್ ಮತ್ತು ಆಕೆಯ ತಾಯಿ ಇಬ್ಬರಿಗೂ ವಂದಿಸಿ —

" ನನ್ನ ಈ ಅನಿರೀಕ್ಷಿತ — ಪ್ರಾಯಶಃ ಅನಪೇಕ್ಷಿತ — ಆಗಮನದಿಂದ ತಮಗೆ ತೊಂದರೆಯಾಯಿತೇನೋ ಮನ್ನಿಸಬೇಕು "

— ಎಂದು ಪ್ರಾರ್ಥಿಸಿದ.

" ತೊಂದರೆಯೇನೂ ಇಲ್ಲ........ ಕುಳಿತುಕೊಳ್ಳಿ........"

— ಎಂದು ಆತನಿಗೆ ಹೇಳಿ, ಮೆಹರ್‌ಬಾನನೂ, ತನ್ನ ತಾಯಿಯೊಂದಿಗೆ ಕುಳಿತುಕೊಂಡು

" ನನ್ನಿಂದ ಏನಾಗಬೇಕಿತ್ತೋ ಹೇಳಿ "

— ಎಂದು ಕೇಳಿದಳು.

ತಾನು ಬಂದ ಕೆಲಸದ ವಿಷಯವನ್ನು ಹೇಗೆ ಹೇಳುವುದೆಂದು ಕ್ಷಣ ಕಾಲ, ತನ್ನ ತಲೆಗೂದಲಲ್ಲಿ ಕೈಯಾಡಿಸಿ, ಆಲೋಚಿಸಿ ಬಳಿಕ ನಿರ್ಧಾರಕ್ಕೆ ಬಂದು ಹೇಳಿದ —

"ತಾವು ನನಗೊಂದು ಬಹು ದೊಡ್ಡ ಉಪಕಾರವನ್ನು ಮಾಡಬೇಕು. "

ಆತ ಪ್ರಾರ್ಥನಾಧ್ವನಿಯಲ್ಲಿ ಹೇಳಿದ ಆ ಮಾತನ್ನು ಕೇಳಿ —

" ಹೇಳಿ, ನನ್ನಿಂದ ಆಗಬಹುದಾದುದನ್ನು ಖಂಡಿತ ಮಾಡುತ್ತೇನೆ."

— ಎಂದಳು ಮೆಹರ್‌ಬಾನು.

" ಹೆಚ್ಚೇನನ್ನೂ ನಾನು ತಮ್ಮಿಂದ ಬೇಡುವುದಿಲ್ಲ. ಮೊನ್ನೆಯದಿನ, ರಾಜಾಸ್ಥಾನದಲ್ಲಿ, ನಡೆದ ತಮ್ಮ ಗಾಯನಕಛೇರಿಯಲ್ಲಿ, ನನ್ನಿಂದ ತಮ್ಮ ಮನಸ್ಸಿಗೆ ಬಹು ಬೇಸರವಾಯಿತು. ಅದರಿಂದಾಗಿ ರಸಭಂಗವಾಗಿ ತಮ್ಮ ಗಾಯನದ ಕಳೆ ಕೆಟ್ಟಿತು. ಆ ಮಹಾಪರಾಧಕ್ಕಾಗಿ ತಮ್ಮಿಂದ ಕ್ಷಮೆ ಬೇಡ ಲೆಂದು ಬಂದಿದ್ದೇನೆ. ತಾವು ಉದಾರ ಮನಸ್ಸಿನಿಂದ ನನ್ನ ಅಂದಿನ ಉದ್ಧಟ ವರ್ತನೆಯನ್ನು ಮನ್ನಿಸಬೇಕು "

— ತನ್ನ ವರ್ತನೆಯ ಬಗ್ಗೆಯೇ ಬೇಸರ, ನಾಚಿಕೆ, ಎಲ್ಲಕ್ಕಿಂತ ಹೆಚ್ಚಾಗಿ ಯಾತನೆ ತುಂಬಿದ ಧ್ವನಿಯಲ್ಲಿ ಬೇಡಿದ ಜಾನ್.

ಆತನ ಹೃದಯದಾಳದಿಂದ ಬಂದ ಕ್ಷಮಾಯಾಚನೆಯನ್ನು ಕೇಳಿ, ಮೆಹರ್‌ಬಾನುವಿನ ಹೆಣ್ಣುಹೃದಯ ಆರ್ದ್ರವಾಯಿತು. ಆ ಬೇಡಿಕೆಯನ್ನು

ಕೇಳಿ ಆಕೆಯೂ ಒಂದು ಕ್ಷಣಕಾಲ ಸುಮ್ಮನಿದ್ದು ಬಳಿಕ —

"ಆ ಬಗ್ಗೆ ತಮ್ಮನ್ನು ಕ್ಷಮಿಸುವ ಮಾತು ಹಾಗಿರಲಿ — ಆ ದಿನ ನನ್ನಿಂದಾದ ವರ್ತನೆಯೂ ಯಾರಿಗೂ ಶೋಭಿಸುವಂಥದಲ್ಲ. ಕ್ಷಣಿಕ ಉದ್ರೇಕಕ್ಕೆ ಒಳಗಾಗಿ, ನನ್ನಿಂದಲೂ ಅಸಭ್ಯ ಕೃತಿ ಘಟಿಸಿ, ತುಂಬಿದ ಸಭೆಯಲ್ಲಿ ತಮಗೆ ಅಪಮಾನವಾಯಿತು. ಆದ್ದರಿಂದ ವಾಸ್ತವವಾಗಿ ನೋಡಿದರೆ ನಾನೇ ತಮ್ಮಿಂದ ಕ್ಷಮೆ ಯಾಚಿಸಬೇಕು"

— ಎಂದಳು.

"ಪ್ರಥಮತಃ ಅಪರಾಧಿಯಾದ ನನಗೆ, ತಮ್ಮ ಕೃತಿಯ ಮೇಲೆ ತೀರ್ಪು ಹೇಳುವ ಅಧಿಕಾರವೇ ಇಲ್ಲ. ಹಾಗಿರುವಾಗ ಇನ್ನು ತಮ್ಮನ್ನು ಕ್ಷಮಿಸುವ ಮಾತು ಎಲ್ಲಿ ಬಂತು? ನೀವು, ಉದಾರತೆಯಿಂದ 'ಕ್ಷಮಿಸಿದೇನೆ' ಎಂದು ಹೇಳಿದರೆ, ನನ್ನ ಹೃದಯದ ಮೇಲಿನ ಬಹು ದೊಡ್ಡ ಭಾರ ಇಳಿಯುತ್ತದೆ."

ಆತನ ಬೇಡಿಕೆಯನ್ನು ಕೇಳಿದ ಮೆಹರ್‌ಬಾನುವಿನ ಹೆಣ್ಣುಹೃದಯ, ಕೂಡಲೇ, 'ಕ್ಷಮಿಸಿದೆ' ಎಂದು ಹೇಳಲು ಧಾವಿಸಿದರೂ, ಯಾವುದೋ ಕುತೂಹಲ ಆಕೆಯ ನಾಲಿಗೆಯನ್ನು ತಡೆದು, ಕೇಳಿದಳು —

"ತಮ್ಮನ್ನು ಕ್ಷಮಿಸುವ ಅಧಿಕಾರ ನನಗಿದೆ ಎಂದಾದರೆ, ನಾನೂ ನಿಮ್ಮನ್ನು ಒಂದು ಪ್ರಶ್ನೆ ಕೇಳಬಹುದೆ?"

"ಕೇಳಿ"

"ಆ ದಿನ ನೀವು ನನ್ನನ್ನು ಹಾಗೆ ನೋಡಿದ್ದೇಕೆ? ಆ ದಿನ ನನ್ನನ್ನು ನೋಡಿದಾಗಲೇ, ನನ್ನ ಹಾಡನ್ನು ಕೇಳಿದಾಗಲೇ, ತಮ್ಮ ಕಣ್ಣಲ್ಲಿ ಕಂಬನಿ ಮೂಡಿದುದೇಕೆ?"

ಮೆಹರ್‌ಬಾನುವಿನಿಂದ ಆ ಬಗೆಯ ಪ್ರಶ್ನೆಯನ್ನು ನಿರೀಕ್ಷಿಸದಿದ್ದ ಜಾನ್ ಮೂಕನಾದ. ಅವನು ತನ್ನ ಪ್ರಶ್ನೆಗೆ ಉತ್ತರ ಕೊಡದಿದ್ದುದನ್ನು ಕಂಡು ಮೆಹರ್‌ಬಾನು ಮತ್ತೆ ಪ್ರಶ್ನೆ ಹಾಕಿದಳು.

"ನನ್ನ ಪ್ರಶ್ನೆಗೆ ಉತ್ತರಕೊಡಲು ನಿಮಗೆ ಮನಸ್ಸಿಲ್ಲವಾದರೆ ಹೇಳಬೇಡಿ."

"ಉತ್ತರ ಕೊಡಲು ಮನಸ್ಸಿಲ್ಲವೆಂದಲ್ಲ........"

"ಮತ್ತೆ?"

"ನನ್ನ ಬಾಳಿನ ದುಃಖವನ್ನು, ಅಪರಿಚಿತರ ಹೃದಯದ ಮೇಲೆ ಹೇರುವುದು ಉಚಿತವಲ್ಲ. ಅದನ್ನು ಕೇಳಿ ನಿಮ್ಮ ಮನಸ್ಸಿಗೆ ವೃಥಾ ನೋವಾಗಪುದ

ಕ್ಕಿಂತ ಹೆಚ್ಚಿನದೇನೂ ಆಗುವುದಿಲ್ಲ. ಆದ್ದರಿಂದ ತಾವು ಆ ಪ್ರಶ್ನೆಯನ್ನು ಕೇಳಿ, ವೃಥಾ ವ್ಯಥೆಗೆ ಆಹ್ವಾನ ಕೊಡಬೇಡಿ, ಬಾನುಸಾಹಿಬಾ "

—' ತನ್ನ ದುಃಖವನ್ನು ಭರಿಸುವುದು ತನ್ನೊಬ್ಬನಿಗೇ ಅಲ್ಲದೆ, ಬೇರೆ ಯಾರಿಗೂ ಶಕ್ಯವಿಲ್ಲ ' ಎಂದು ಹೇಳುವ ಧ್ವನಿಯಲ್ಲಿ ಹೇಳಿದ ಜಾನ್.

ಆತನ ಮಾತಿನ ಭಾವ ಅರಿವಾಗಿ, ಮೆಹರ್‌ಬಾನುವಿನ ಮನಸ್ಸಿಗೆ " ನನ್ನ ಕಥೆ ಕೇಳಲು ಪರಕೀಯಳಾದ ನೀನಾರು ? " ಎಂಬ ನಿರಾಕರಣೆಯಿಂದ ಇರಿಸು ಮುರಿಸಾಗಿ " ನನಗೂ ಇಚ್ಛೆಯಿಲ್ಲ. ಹೋಗಿ " ಎಂದು ಹೇಳಬೇಕೆನಿಸಿದರೂ, " ತನ್ನ ದುಃಖದ ಭಾರವನ್ನು ತಾನೊಬ್ಬನೇ ಭರಿಸಬಲ್ಲೆ" ಎಂಬ ಆತನ ಗಂಡುನುಡಿ ಆಕೆಯ ಹೃದಯಕ್ಕೆ ಮೆಚ್ಚಿಗೆಯಾಗಿ ಹೇಳಿದಳು,

" ನೀವು ನಿಮ್ಮ ವ್ಯಥೆಯ ಕಾರಣ ಹೇಳದಿದ್ದರೂ. ಅದೇನಿರಬಹುದೆಂದು ನನಗೆ ತಿಳಿದಿದೆ. ಹಾಗಿರುವಾಗ, ಈಗ ನೀವೇ ಹೇಳುವುದರಿಂದ ಹೆಚ್ಚಿನ ವ್ಯಥೆಯೇನೂ ಆಗಲಾರದು "

" ನನ್ನ ದುಃಖದ ಕಾರಣ ನಿಮಗೆ ತಿಳಿದಿದೆಯೇ ? "

— ಚಕಿತನಾಗಿ ಕೇಳಿದ ಜಾನ್.

" ತಿಳಿದಿದೆ "

" ನಿಮಗೆ ಯಾರು ಹೇಳಿದರು ? "

" ರಾಜಾಸಾಹೇಬರು. ಸಭೆ ಮುಗಿದ ಬಳಿಕ, ಅವರೇ ನಿಮ್ಮ ವಿಷಯವನ್ನೆಲ್ಲ ಹೇಳಿ ' ದುಃಖಿಯನ್ನು ಕ್ಷಮಿಸಿ ' ಎಂದರು."

" ನಿಜವೇ ? "

" ಸತ್ಯವಾಗಿಯೂ "

" ಹಾಗಿದ್ದರೆ ನಾನು ಇನ್ನು ಹೇಳುವುದೇನೂ ಉಳಿಯಲಿಲ್ಲ."

" ಆದರೆ, ನಾನು ಕೇಳುವುದು ಉಳಿದಿದೆ."

" ಏನು ? "

" ಯಾವ ನೆನಪು ನಿಮ್ಮ ಕಣ್ಣಲ್ಲಿ ಕಂಬನಿ ಮೂಡಿಸಿತು ಹೇಳಿ ? ಯಾವುದು ನಿಮ್ಮ ಬಾಳಿನ ಗತಕಾಲದ ದುಃಖವನ್ನು ಕೆರಳಿಸಿತು — ನಾನೇ, ನನ್ನ ಹಾಡುಗಾರಿಕೆಯೇ ? "

ಮೆಹರ್ ಬಾನುವಿನ ಪ್ರಶ್ನೆಗೆ, ಜಾರ್ಜ್, ಉತ್ತರ ಹೇಳುವ ಮೊದಲೇ, ತನ್ನ ಮಗಳು, ಅಪರಿಚಯಸ್ಥರಲ್ಲಿ, ಅತಿ ಸಲಿಗೆ ವಹಿಸಿ, ಆತನ ದುಃಖ ಕಾರಣವನ್ನು ಆತನಿಗೆ ಹೇಳಲು ಇಚ್ಛೆಯಿಲ್ಲವಾದರೂ ಕೆದಕಿ ಕೆದಕಿ ಕೇಳುತ್ತಿರುವುದನ್ನು ಕಂಡು, ಆಕೆಯ ತಾಯಿಗೇ ಬೇಸರವಾಗಿ—

" ಅತಿ ಪ್ರಶ್ನೆ ಉಚಿತವಲ್ಲ ಮೆಹರ್. ಅದೆಲ್ಲವನ್ನೂ ಕೇಳಲು ನಿನಗೆ ಅಧಿಕಾರವಿಲ್ಲ."

—ಎಂದಳು ಕೊಂಚ ಗಡುಸಾದ ಧ್ವನಿಯಲ್ಲಿ.

ಆಕೆಯ ಮಾತನ್ನು ಕೇಳಿ ಮೇಹರ್ ಬಾನುವಿಗೂ ತನ್ನ ಪ್ರಶ್ನೆಗಳ ಅನೌಚಿತ್ಯ ಅರಿವಾಗಿ—

" ನಿಜ ಮಾ, ಅವರ ದುಃಖ ಕಾರಣವನ್ನು ಕೇಳಲು ನನಗೆ ಅಧಿಕಾರವಿಲ್ಲ."

—ಎಂದಳು.

ಆ ಮಾತನ್ನು, ಜಾರ್ಜನ ದುಃಖದ ಕಾರಣವನ್ನು ಕೇಳಲು ತನಗೆ ಅಧಿಕಾರವಿಲ್ಲ ಎಂಬುದನ್ನು ಬಾಯಿಬಿಟ್ಟು ಹೇಳಬೇಕಾಗಿ ಬಂದಾಗ, ಮೆಹರಳ ಹೃದಯಕ್ಕೆ ಏಕೋ ನೋವಾಯಿತು. ಆಕೆಯಾಡಿದ ಮಾತಿನಲ್ಲೂ ಆ ನೋವು ಸ್ಪಷ್ಟವಾಗಿ ಮೂಡಿತ್ತು.

" ಅಹುದು ಮೆಹರ್, ನಿನಗೆ ಅಧಿಕಾರವಿಲ್ಲ. ಅಷ್ಟೇ ಅಲ್ಲ—ಕುರುಡು ಕುತೂಹಲದಿಂದ, ಮರೆತ ದುಃಖವನ್ನು ಕೆರಳಿಸುವುದು ಮಾನವೀಯತೆಯೂ ಅಲ್ಲ. ದುಃಖೋಪಶಮನದ ಶಕ್ತಿ ಇಲ್ಲದ ಸಂದರ್ಭದಲ್ಲಿ ಕುತೂಹಲ ವ್ಯಕ್ತ ಪಡಿಸುವುದಕ್ಕಿಂತ ಅಮಾನುಷ ಕಾರ್ಯ ಮತ್ತೊಂದಿಲ್ಲ."

—ಏಟಿನ ಮೇಲೇ ಏಟು ಹಾಕುವಂತೆ ಹೇಳಿದಳು ಮೆಹರ್ ಬಾನುವಿನ ತಾಯಿ. ತನ್ನ ತಾಯಿಯ ಮಾತನ್ನು ಕೇಳಿ, ಮೆಹರ್ ಬಾನುವಿನ ಮುಖ ಒಮ್ಮೆ ಕೆಂಪೇರಿ, ಮತ್ತೆ ಬೆಳ್ಳಗಾಯಿತು. ಜಾರ್ಜನತ್ತ ತಿರುಗಿ—

" ನನ್ನ ಕುತೂಹಲವನ್ನು ಕ್ಷಮಿಸಿ."

—ಎಂದು ಶುಷ್ಕವಾದ ಧ್ವನಿಯಲ್ಲಿ ಹೇಳಿದಳು.

ಅವಳ ಮಾತನ್ನು ಕೇಳಿ, ನಗುನಗುತ್ತಾ ಉರಿಯುತ್ತಿದ್ದ ದೀಪವು ನಿರ್ದಯತೆಯಿಂದ ನಂದಿದಂತಾಗಿ ತಾನೇ ಮೆಹರ್ ಬಾನುವಿನ ರಕ್ಷಣೆಗೆ ಧಾವಿಸುತ್ತಾ—

"ಬಾನು ಸಾಹೇಬರಿಂದ ಕ್ಷಮಿಸಲ್ಪಡಬೇಕಾದ ಅಕಾರ್ಯವೇನೂ ಆಗಿಲ್ಲ, ಮಾ ಸಾಹೇಬಾ. ದುಃಖಕ್ಕೆ ಅದನ್ನು ಸಹೃದಯರಲ್ಲಿ ಹಂಚಿಕೊಳ್ಳುವುದಕ್ಕಿಂತ ಹೆಚ್ಚಿನ ಉಪಶಮನವೇ ಇಲ್ಲ. ನನ್ನ ಹೃದಯದ ದುಃಖಭಾರವನ್ನು ಇವರು ಹೊರಲು ಮುಂದಾದುದು ಇವರ ಹಿರಿಮೆ. ಅವರದು ಕುತೂಹಲವಲ್ಲ, ಕರುಣೆ; ನಾನು ಬಲ್ಲೆ! ಆದ್ದರಿಂದ ತಾವು ತಮ್ಮ ಕುತೂಹಲಕ್ಕಾಗಿ ಸಂಕೋಚಪಡುವ ಕಾರಣವಿಲ್ಲ ಬಾನು ಸಾಹಿಬಾ. ಕ್ಷುಲ್ಲಕ ವ್ಯಕ್ತಿಯೋರ್ವನ ಬಗ್ಗೆ ತಾವು ತೋರಿದ ಆಸಕ್ತಿಗಾಗಿ ನಾನು ಕೃತಜ್ಞನಾಗಿದ್ದೇನೆ. ಕೇಳಿ—ನೀವೇನು ಪ್ರಶ್ನೆ ಮಾಡಿದರು ಉತ್ತರ ಕೊಡುತ್ತೇನೆ."

—ಎಂದು ಹೇಳಿದ.

ಜಾರ್ಜ್ ಹೇಳಿದ ಮಾತನ್ನು ಕೇಳಿ ಮೆಹರ್‌ಬಾನು, ನೀರವವಾಗಿ ಆತನ ಮುಖವನ್ನು ದಿಟ್ಟಿಸಿದಳು.

ಆತನೂ ಮೂಕಕೃತಜ್ಞತೆಯಿಂದ ಹೊಳೆಯುತ್ತಿದ್ದ ನಯನಗಳಿಂದ ಮೆಹರ್‌ಬಾನುವಿನ ಮುಖವನ್ನು ನೋಡಿದ.

ಆ ದೃಷ್ಟಿಗಳ ಸಂಗಮವಾಗುತ್ತಿದ್ದ ಹಾಗೇ, ಏಕೋ ಮೆಹರ್‌ಬಾನುವಿನ ಹೃದಯದಲ್ಲಿ. ಅಂದಿನವರೆಗೂ, ಹಿಂದೆಂದೂ ಅನುಭವಿಸದಿದ್ದ ಒಂದು ಬಗೆಯ ಸ್ಪಂದನ ಮೂಡಿ, ಕೆನ್ನೆಗಳು ಕೆಂಪೇರಿ, ಮೊಗ ನೆಲದತ್ತ ಸಾಗಿತು.

ಮೆಹರ್‌ಬಾನುವಿನ ದೃಷ್ಟಿಚಂದ್ರದರ್ಶನದಿಂದ ಜಾರ್ಜನ ಹೃದಯಸಾಗರದಲ್ಲೂ ಅಸ್ಪಷ್ಟ ಆಂದೋಲನ ಮೂಡಿತು.

ಆದರೆ ಇಬ್ಬರ ಬಾಯಿಂದಲೂ ಮಾತುಗಳು ಹೊರಬೀಳಲಿಲ್ಲ

ಅವರಿಬ್ಬರ ಮೌನವನ್ನು ಕಂಡ ಮೆಹರ್‌ಬಾನುವಿನ ತಾಯಿಯೇ, ಆ ಮೌನವನ್ನು ಮುರಿದು —

'ತಾವು ನನ್ನ ಮಗಳ ಮೌಢ್ಯವನ್ನು ಮನ್ನಿಸಬೇಕು. ಇಷ್ಟು ವಯಸ್ಸಾದರೂ ಮೆಹರ್ ಇನ್ನೂ ಪ್ರಪಂಚಜ್ಞಾನವಿಲ್ಲದ ಹಸುಳೆ. ಆದುದರಿಂದ ಅವಳ ಮಾತುಗಳಿಗೆ ತಾವು ಅನ್ಯಥಾ ಅರ್ಥ ಕಲ್ಪಿಸಬಾರದು,'

—ಎಂದು ಜಾರ್ಜಗೆ ಹೇಳಿದಳು.

'ಅಪಾರ್ಥ ಕಲ್ಪಿಸುವ ಪ್ರಶ್ನೆಯೇ ಇಲ್ಲ. ಅಪರಿಚಿತನೋರ್ವನಲ್ಲಿ ತಾವು ತೋರುತ್ತಿರುವ ಆಸಕ್ತಿಗಾಗಿ ನಾನು ಕೃತಜ್ಞನಾಗಿದ್ದೇನೆ, ಬಾನು ಸಾಹಿಬಾ. ನನ್ನನ್ನು ಪ್ರಶ್ನಿಸಿದಾಗ, ನಿಮ್ಮ ಹೃದಯದಲ್ಲಾವ ಮಾತು

ಮಿಡಿಯುತ್ತಿದ್ದಿತೆಂದು ನಾನು ಬಲ್ಲೆ. ನಿನ್ನೆಯ ದಿನ ನಿಮ್ಮ ಗಾಯನವನ್ನು ಕೇಳಿದಾಗ, ಎಂದೋ ಕಣ್ಣುಮರೆಯಾಗಿ ಹೋದ ನನ್ನ ರೋಸಿಟಾಳ ಒಲವಿನ ನೆನಪು ಮೂಡಿಬಂದಿತು. ಆ ನೆನಪು ಮೂಡಿದಾಗ, ನಿಮ್ಮಲ್ಲಿ ಅವಳನ್ನೇ ಕಂಡಂತಾಗಿ ನಿಮ್ಮ ಮುಖದಲ್ಲಿ ನಾಟಿದ ದೃಷ್ಟಿಯನ್ನು ಮತ್ತೆ ಹಿಂದೆಳೆಯಲಾಗ ಲಿಲ್ಲ. ಆದ್ದರಿಂದ ನನ್ನಿಂದ ಆ ಉದ್ಧಟತನ ನಡೆಯಿತು. ಕಾರಣ ತಿಳಿಯಿತಲ್ಲ, ಈಗಲಾದರೂ ನನ್ನನ್ನು ಮನ್ನಿಸುತ್ತೀರಾ?" ಆತನ ಆ ಪ್ರಶ್ನೆಗೂ ಮೆಹರ್ ಏನೂ ಉತ್ತರ ಹೇಳಲಿಲ್ಲ. ಆತನ ಮಾತು ಕೇಳುತ್ತಿದ್ದ ಹಾಗೇ ಅವಳ ನೇತ್ರಗಳು ಸಜಲವಾಗಿ ಅವನತ್ತ ನೋಡಿದವು.

ಆ ನೋಟ ಸ್ಪರ್ಶದಿಂದ ಜಾರ್ಜನ ಮೈ ರೋಮಾಂಚಿತವಾಗಿ, ಅವರ ಇದಿರು ಶಾಂತನಾಗಿ ಕುಳ್ಳಿರಲಾರದೆ, ತಟಕ್ಕನೆ ಎದ್ದು ನಿಂತು,

"ಇಷ್ಟನ್ನು ನಿಮ್ಮ ಮುಂದೆ ಹೇಳದೆ ನನ್ನ ಹೃದಯಕ್ಕೆ ಶಾಂತಿ ಬರಲಿಲ್ಲ. ಅದಕ್ಕಾಗಿ ಇಲ್ಲಿಗೆ ಬಂದು ತಮಗೆ ತೊಂದರೆ ಕೊಟ್ಟೆ. ಇನ್ನು ನನಗೆ ಹೊರಡಲು ಅನುಮತಿ ಕೊಡಿ."

—ಎಂದು ಹೇಳಿ ಹೊರಡಲು ಸಿದ್ಧನಾಗಿ ಮೇಲೆದ್ದು ನಿಂತ.

ಆಗಲೂ ಮೆಹರ್ ಬಾನು ಏನೂ ಮಾತಾಡಲಿಲ್ಲ.

ತಗ್ಗಿಸಿದ ತಲೆಯನ್ನು ಮೇಲೆತ್ತಿ ನೋಡಲಿಲ್ಲ.

"ಅರೆ, ಇದೇನು—ಹೀಗೆ ಹೊರಟು ಬಿಟ್ಟಿರಿ - ಕೊಂಚ ತಾಳಿ. ಷರಬತ್ ತರಿಸುತ್ತೇನೆ - ಕುಡಿದು ಹೋಗುವಿರಂತೆ."

—ಮತ್ತೆ ಮೆಹರ್ ಬಾನುವಿನ ತಾಯಿಯೇ ಹೇಳಿದಳು.

"ನನಗೇನೂ....ಅದರ ಅಗತ್ಯವಿರಲಿಲ್ಲ...."

"ಆದರೆ ಅದು ನಮ್ಮ ಧರ್ಮ"

—ಎಂದು ಹೇಳಿ ಮೆಹರ್ ಬಾನುವಿನ ತಾಯಿ ದಾಸಿಗೆ ಅಪ್ಪಣೆ ಮಾಡಿ ಬರಲು ಹೋದಳು.

ತನ್ನ ತಾಯಿ ಅಲ್ಲಿಂದ ಹೋದ ಬಳಿಕಲೂ ಮೆಹರ್, ಶಿಲಾವಿಗ್ರಹದಂತೆ ಸುಮ್ಮನೇ ಕುಳಿತೇ ಇದ್ದಳು.

ಅನತಿ ಕಾಲದಲ್ಲಿಯೇ ದಾಸಿ, ಷರಬತ್ತನ್ನು ತಂದುಕೊಟ್ಟ ಬಳಿಕ ಜಾರ್ಜ್, ಅದನ್ನು ಕುಡಿದು —

" ಇನ್ನು ನನಗೆ ಹೊರಡಲು ಅಪ್ಪಣೆಯೇ ?"

—ಎಂದು ಕೇಳಿದ.

" ಹೋಗಿ ಬನ್ನಿ. ದೇವರು ನಿಮಗೆ ಒಳ್ಳೆಯದನ್ನು ಮಾಡಲಿ."

—ತಮ್ಮಿಬ್ಬರ ಪರವಾಗಿಯೂ ಮೆಹರ್‌ಬಾನುವಿನ ತಾಯಿಯೇ ಹೇಳಿದಳು.

" ತಮ್ಮ ಔದಾರ್ಯ, ಸತ್ಕಾರ ಎಲ್ಲಕ್ಕೂ ನಾನು ಕೃತಜ್ಞ "

—ಎಂದು, ಜಾರ್ಜ ಎದ್ದು ನಿಂತು, ಅವರಿಬ್ಬರಿಗೂ ತಲೆಬಾಗಿ ವಂದಿಸಿ, ಅಲ್ಲಿಂದ ಹೊರಟ. ಆತನ ಹೆಜ್ಜೆಯ ಸದ್ದು ಬಾಗಿಲನ್ನು ಸಮೀಪಿಸುವವರೆಗೂ ಸುಮ್ಮನಿದ್ದ ಮೆಹರ್ ತಟಕ್ಕನೆ ಎದ್ದು ನಿಂತು —

" ಇಲ್ಲಿ ನೋಡಿ...."

—ಎಂದು ಹೇಳಿದಳು.

" ಏನು ?"

—ಬಾಗಿಲನ್ನು ಸಮೀಪಿಸಿದ ಜಾರ್ಜ ಆಕೆಯತ್ತ ತಿರುಗಿ ಕೇಳಿದ.

" ಮತ್ತೊಮ್ಮೆ....ಮತ್ತೊಮ್ಮೆ....ಬರುತ್ತೀರಲ್ಲವೇ ?"

—ಮೃದುವಾಗಿ ಕಂಪಿಸುತ್ತಿದ್ದ ಧ್ವನಿಯಲ್ಲಿ ಕೇಳಿದಳು ಮೆಹರ್‌ಬಾನು.

"ಆಯಿತು.... ಬಿಡುವಾದಾಗ ಬರುತ್ತೇನೆ."

—ಎಂದ ಜಾರ್ಜ, ಮೆಹರ್‌ಬಾನುವಿನ ಅನಿರೀಕ್ಷಿತ ಪ್ರಶ್ನೆಯಿಂದ ಚಕಿತನಾಗಿ.

" ಹಾಗೆಂದು ಮರೆತು ಬಿಡಬಾರದು. ಖಂಡಿತ ಬರಬೇಕು "

—ಎಂದು, ಉಸಿರು ಹತ್ತುವಷ್ಟು ವೇಗವಾಗಿ ಹೇಳಿ, ಆತನ ಉತ್ತರಕ್ಕೆ ಕಾಯದೆ, ಮೆಹರ್‌ಬಾನು ಅಲ್ಲಿಂದ ವೇಗವಾಗಿ ಹೊರಟು ಹೋದಳು.

ಆಕೆಯ ಮಾತನ್ನು ಕೇಳಿದ ಜಾರ್ಜಗೆ ಮಿಂಚು ಮುಟ್ಟಿದಂತಾಗಿ, ಒಂದು ಕ್ಷಣಕಾಲ ನಿಂತಲ್ಲೇ ನಿಂತಿದ್ದು, ಬಳಿಕ ಮುಚ್ಚಿದ ಬಾಗಿಲನ್ನು ತೆಗೆದುಕೊಂಡು ಹೊರಟುಹೋದ.

೩

ಚಿತ್ರದುರ್ಗಕ್ಕೆ ಹೋದ ಜುಲ್‌ಫಿಕಾರ್‌ಖಾನ್ ತಂದ ಉತ್ತರವನ್ನು ಕೇಳಿ, ಚಿತ್ರದುರ್ಗದ ನಾಯಕರು ತನಗೆ ಕಳಿಸಿದ ಬಾಕುವಿನ ಉಡುಗೊರೆಯನ್ನು ನೋಡಿ, ಸೀರ್ಯದ ದಿವಾನ್ - ಫೌಜುದಾರ್ ಖಾಸಿಂಖಾನ್ ತನ್ನ ಮನಸ್ಸಿನಲ್ಲೇ ಕಟ್ಟಿಕೊಂಡಿದ್ದ ಆಶಾಸೌಧ ಕೆಳಕ್ಕುರುಳಿ ಪುಡಿಪುಡಿಯಾಯಿತು.

"ಅಂತೂ ನಮ್ಮ ಸ್ನೇಹದ ಬಲೆಗೆ ದುರ್ಗದ ಹಕ್ಕಿ ಬೀಳಲಿಲ್ಲ ?"

—ನಿಧಾನವಾಗಿ, ಆಳು ಹೊತ್ತಿಸಿಟ್ಟ ಗುಡುಗುಡಿಯಿಂದ ಹೊಗೆಯನ್ನೆಳೆದು, ಅಷ್ಟೇ ನಿಧಾನವಾಗಿ ಅದನ್ನು ಹೊರಗೆ ಉಗುಳುತ್ತಾ ಕೇಳಿದ ಖಾಸಿಂಖಾನ್.

"ದುರ್ಗ ಸಾಮಾನ್ಯಕ್ಕೆ ಬಗ್ಗುವ ಮಿಕವಲ್ಲ, ಜಹಾಪನಾ, ಅದಕ್ಕೆ ಬಂದೂಕಿನೇಟೇ ಗುರು."

—ಚಿತ್ರದುರ್ಗದಲ್ಲಿ ತನಗಾದ ಅಪಜಯದಿಂದ ಕ್ರೋಧ ಪರವಶಚಿತ್ತನಾದ ಜುಲ್‌ಫಿಕಾರ್‌ಖಾನ್ ಹೇಳಿದ —

"ಮೊದಲೇ ನಾನು ತಮ್ಮಲ್ಲಿ ವಿನಂತಿ ಮಾಡಿಕೊಂಡೆ - 'ದಿಗ್ವಿಜಯಕ್ಕೆ ನನ್ನನ್ನು ನೇಮಿಸಿ, ಹೆಸರುಳಿಯದಂತೆ ಮಾಡುತ್ತೇನೆ' ಎಂದು. ಖಾವಂದರು ನನ್ನ ಬಿನ್ನಹವನ್ನು ಮನ್ನಿಸಲಿಲ್ಲ; ಸಂಧಾನ ಪ್ರಯತ್ನ ಮಾಡಿ ನಮ್ಮ ದೌರ್ಬಲ್ಯವನ್ನು ತೋರಿಸಿಕೊಂಡಂತಾಯಿತು. ಈಗಲೂ ಸರಿಯೆ, ಆ ಕೆಲಸವನ್ನು ನನಗೆ ಬಿಡಿ. ದುರ್ಗದ ಆ ಹರಾಮ್‌ಖೋರ ನಾಯಕನನ್ನು ಅಗೋ ಇಗೋ ಎನ್ನುವುದರೊಳಗಾಗಿ, ಹೆಡೆಮುರಿ ಕಟ್ಟಿ ತಂದು ನಿಮ್ಮ ಪಾದ ತಲದಲ್ಲಿ ಕೆಡಹುತ್ತೇನೆ."

"ಈಗ ಆ ಯೋಚನೆಯಿಂದ ಫಲವಿಲ್ಲ ಜುಲ್‌ಫಿಕಾರ್"

"ಏಕೆ ?"

—ಚಕಿತನಾಗಿ ಕೇಳಿದ ಜುಲ್‌ಫಿಕಾರ್ ಖಾನ್

ಜುಲ್‌ಫಿಕಾರ್ ಖಾನನ ಪ್ರಶ್ನೆಗೆ ಉತ್ತರವಾಗಿ, ಖಾಸಿಂಖಾನ್

ಬೇರೇನೂ ಮಾತನಾಡದೆ ಕುಳಿತಿದ್ದ ಆಸನದಿಂದ ಮೇಲೆದ್ದು ಹೋಗಿ, ಹತ್ತಿರದ ವೇದಿಕೆಯಲ್ಲಿರಿಸಿದ ಪತ್ರವೊಂದನ್ನು ತಂದು ಜುಲ್‌ಫಿಕಾರ್ ಖಾನನ ಕೈಗಿತ್ತ.

ಆತನ ಕೃತಿಯ ಇಂಗಿತವನ್ನರಿತ ಜುಲ್‌ಫಿಕಾರ್ ಖಾನ್ ಬೇರೇನೂ ಪ್ರಶ್ನೆ ಹಾಕದೆ, ದಿವಾನ್ ಫೌಜುದಾರರು ತನ್ನ ಕೈಗಿತ್ತ ಪತ್ರವನ್ನು ಓದಿ ನೋಡಿದ.

ಆ ಪತ್ರ —

ರಾಯದುರ್ಗದ ನಾಯಕರ ಆಸ್ಥಾನದಲ್ಲಿದ್ದ, ದಿವಾನ್-ಫೌಜುದಾರರ ವಕೀಲರು ಕಳುಹಿಸಿದ ರಹಸ್ಯ ಪತ್ರ.

ಆ ಪತ್ರದಲ್ಲಿ—

" ಹರಪನಹಳ್ಳಿಯ ಕಡೆಯಲ್ಲಿ ಲೂಟಿ ಮಾಡಿಕೊಂಡು ಬಂದ ಸಂತೋಜಿ ಘೋರ್ಪಡೆಯ ಸೇನೆಗಳು, ಈಗ ರಾಯದುರ್ಗದ ಬಳಿ ಬರುತ್ತಿವೆ. ನನಗೆ ಬಹು ವಿಶ್ವಾಸನೀಯವಾಗಿ ತಿಳಿದುಬಂದ ವಾರ್ತೆಯ ಪ್ರಕಾರ, ರಾಯದುರ್ಗದ ನಾಯಕರು, ಸಂತೋಜಿ ಘೋರ್ಪಡೆಯನ್ನು ಎದುರಿಸದೆ, ಅವನಿಗೆ 'ಷಾಮಿಲ್' ಆಗಬಹುದು. ರಾಯದುರ್ಗದವರ ಒತ್ತಾಸೆಯಿಂದ ಸಂತೋಜಿ ಘೋರ್ಪಡೆಯ ಸೇನೆ, ನಾಯಕನ ಹಟ್ಟಿ, ತಳಕು, ದೊಡ್ಡೇರಿ ಮೊದಲಾದ ನಮ್ಮ ಸೀಮೆಯ ಕೋಟೆಗಳ ಮೇಲೆ ದಾಳಿ ಮಾಡಿ, ಹಿರಿಯೂರು ಮಾರ್ಗವಾಗಿ ಸೀರ್ಯದತ್ತ ನುಗ್ಗಬಹುದು.

" ಈಗ ಕೆಲವು ದಿನಗಳಿಂದ ಅಪರಿಚಿತರಾದ ಮರಾಟೆಯವರು, ರಾಯದುರ್ಗದ ನಾಯಕರಲ್ಲಿಗೆ ಬಂದು ಹೋಗುವುದು ಹೆಚ್ಚಾಗಿದೆ. ಇಲ್ಲಿಯ ನಾಯಕರು, ಈಚೆಗೆ ನಮ್ಮ ಬಗ್ಗೆ ಮೊದಲಿನಷ್ಟು ವಿಶ್ವಾಸದಿಂದ ನಡೆದುಕೊಳ್ಳುತ್ತಿಲ್ಲ. ಅವರ ವರ್ತನೆಯಲ್ಲಿ, ಇದುವರೆಗೂ ಇಲ್ಲದ ಬಿಗಿ ಕಾಣುತ್ತಿದೆ.

" ಆದುದರಿಂದ ಖಾವಂದರವರು, ನಾಯಕರ ಸ್ನೇಹದಲ್ಲಿ 'ಹೆಚ್ಚು ವಿಶ್ವಾಸವಿಡದೆ, ಜಾಗರೂಕರಾಗಿರಬೇಕೆಂಬುದು ಈ ಗುಲಾಮನ ಅಭಿಪ್ರಾಯ. ಆದಷ್ಟು ಬೇಗ ಇತ್ತ ಕಡೆಯ ಗಡಿಗಳನ್ನು ಬಂದೋಬಸ್ತು ಮಾಡಬೇಕು "

— ಎಂದು ಹೇಳಲಾಗಿತ್ತು.

ಆ ಪತ್ರವನ್ನು ಓದಿ ಓದುತ್ತಾ, ಜುಲ್‌ಫಿಕಾರ್ ಖಾನನ ಮೊಗದಲ್ಲಿದ್ದ ಸಿಟ್ಟು ಮಾಯವಾಗಿ ಚಿಂತೆಯು ಕಾರ್ಮೋಡ ಕವಿಯಿತು.

" ಪತ್ರವನ್ನು ಓದಿದೆಯಾ ಜುಲ್‌ಫಿಕಾರ್ ?"

— ಖಾಸಿಂಖಾನ್ ಕೇಳಿದ.

" ಓದಿದೆ ಜಹಾಪನಾ "

" ಆ ಬಗ್ಗೆ ನಿನ್ನ ಅಭಿಪ್ರಾಯವೇನು ?"

" ಏನು ಹೇಳಲಿ – ಅಂತೂ ಮಳೆ ನಿಂತರೂ ಮರದ ಹನಿಯು ಕಾಟ ತಪ್ಪಲಿಲ್ಲ ಎನ್ನುವ ಹಾಗಿದೆ ಈ ಪುಂಡ ಮರಾಟಿಗರ ಸಹವಾಸ. ಒಮ್ಮೆ ಅವರನ್ನು ಮೂಲೋತ್ಪಾಟನ ಮಾಡುವವರೆಗೂ ನಮಗೆ ನಿದ್ರೆ – ಊಟಕ್ಕೂ ವಿಶ್ರಾಂತಿ ಕೊಡುವಂತಿಲ್ಲ ಈ ಸೈತಾನರು."

— ಮರಾಟರ ಬಗ್ಗೆ ಸಿಟ್ಟಿನಿಂದ ಹಲ್ಲು ಕಡಿಯುತ್ತಾ ಹೇಳಿದ ಜುಲ್‌ಫಿಕಾರ್ ಖಾನ್.

ಜುಲ್‌ಫಿಕಾರ್ ಖಾನನ ಮಾತಿಗೆ ಏನೊಂದೂ ಉತ್ತರಕೊಡದೆ, ಅವನು ಕೊಟ್ಟ ಪತ್ರವನ್ನು ತೆಗೆದುಕೊಂಡು, ಖಾಸಿಂಖಾನ್ ಅವನ ಕೈಯಲ್ಲಿ ಮತ್ತೊಂದು ಪತ್ರವನ್ನು ಕೊಟ್ಟ. ' ಇದೇನು ಪತ್ರ ' ಎಂದು ಅಚ್ಚರಿ ಪಡುತ್ತಲೇ ಜುಲ್‌ಫಿಕಾರ್ ಖಾನ್ ಆ ಪತ್ರವನ್ನು ತೆಗೆದು ಓದಿದ.

ಎರಡನೆಯ ಪತ್ರ ದೆಹಲಿಯಿಂದ, ಸಾಕ್ಷಾತ್ ಆಲಂಗೀರ್ ಬಾದಷಹರ ಸನ್ನಿಧಾನದಿಂದಲೇ ಬಂದ ಪತ್ರ.

ಆ ಪತ್ರದಲ್ಲಿ—

" ಸೀರ್ಯದ ದಿವಾನ್-ಫೌಜುದಾರ್ ಖಾಸಿಂಖಾನನಿಗೆ—

ಈ ' ತುರುತು ' ಪತ್ರದ ಅಭಿಪ್ರಾಯವೇನೆಂದರೆ—

ದೆಹಲಿಯ ದರಬಾರಿಗೆ ತಿಳಿದ ಬೇಹುಗಾರೀ ವಾರ್ತೆಗಳ ಮೂಲಕ, ನೀವು ನಿಮ್ಮ ಪರಗಣೆಗೆ ಸಂಬಂಧಿಸಿದ ವ್ಯವಹಾರಗಳನ್ನು ಸಾಕಷ್ಟು ' ಜಬರ್ ದಸ್ತಿ 'ನಿಂದ ನಿರ್ವಹಿಸುತ್ತಿಲ್ಲವಾಗಿಯೂ, ಆದರಿಂದಾಗಿ ನಿಮ್ಮ ಅಧಿಕಾರಕ್ಕೆ ಒಳಪಟ್ಟ ಜನ, ಪುಂಡ ಮರಾಟಿ ಸರಕಾರದ ಸಹಾಯದಿಂದ, ನಿಮ್ಮ ದಿವಾನ್-ಫೌಜುದಾರಿಕೆಗೆ ಒಳಪಟ್ಟ ಸೀಮೆಯಲ್ಲಿ ಮೊಗಲ್ ಸಾಮ್ರಾಜ್ಯಶಾಹಿಯನ್ನು ಬುಡಮೇಲು ಮಾಡುವ ಪ್ರಯತ್ನದಲ್ಲಿದ್ದಾರೆಂದೂ ತಿಳಿದು ಬಂದಿದೆ.

ಅಷ್ಟೇ ಅಲ್ಲ —

ಇದೇ ಉದ್ದೇಶದಿಂದಲೇ, ಹರಪನಹಳ್ಳಿ, ರಾಯದುರ್ಗದ ನಾಯಕರು ಪಿತೂರಿ ನಡೆಸಿ, ಸಂತೋಜಿ ಘೋರ್ಪಡೆಯ ಸೈನ್ಯಕ್ಕೆ ಆಹ್ವಾನ ಕೊಟ್ಟಿರುವ

ರೆಂದೂ ಷಹಾನ್‌ಷಹರ ಖುದ್ದು ಪರಾಂಬರಿಕೆಗೆ ವೇದ್ಯವಾಗಿದೆ.

ಆದ್ದರಿಂದ ನೀವು ಈ ವಿಷಯದಲ್ಲಿ ಕೂಡಲೇ 'ನಿಗಾ' ವಹಿಸಿ ಕೆಲಸ ಮಾಡಬೇಕೆಂದೂ, ನಿಮ್ಮ ಆಡಳಿತಕ್ಕೆ ಒಳಪಟ್ಟ ಜನರನ್ನು ಬಿಗಿಮಾಡಿ, ಮರಾಟರ ಹಾವಳಿಯನ್ನು ಮಟ್ಟಹಾಕಬೇಕೆಂದೂ, ಷಹಾನ್‌ಷಹಾರವರು ಈ ಮೂಲಕ ತಮಗೆ ಅಪ್ಪಣೆ ಮಾಡಿದಾರೆ. ಇದು ನಿಮ್ಮಿಂದ ಸಾಧ್ಯವಾಗ ದಿದ್ದಲ್ಲಿ, ಸಹಾಯಕ್ಕೆ ಬಿಜಾಪುರದವರನ್ನು ಕೇಳಬಹುದು'

— ಎಂದು ಹೇಳಿತ್ತು.

ಏನೊಂದೂ ಮಾತನಾಡದೆ ಜುಲ್‌ಫಿಕಾರ್‌ಖಾ ಆ ಪತ್ರವನ್ನು ಓದಿ ಮುಗಿಸಿ, ಪತ್ರವನ್ನು ಖಾಸಿಂಖಾನನಿಗೆ ಹಿಂದುರಿಗಿಸಿದ

"ಅದನ್ನು ಓದಿಕೊಂಡೆಯಾ ಜುಲ್‌ಫಿಕಾರ್ ?"

"ಹೂಂ."

"ಆ ಪತ್ರದ ಅಭಿಪ್ರಾಯ ನಿನ್ನ ಮನಸ್ಸಿಗೆ ವೇದ್ಯವಾಯಿತೇ ?"

"ಆಯಿತು, ಖಾವಂದ್."

"ಈಗ ಹೇಳು – ದುರ್ಗದವರನ್ನೇನು ಮಾಡುವುದು ?"

"ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಹೇಗೆ ಮಾಡಬೇಕೆಂದು ಖಾವಂದರೇ ನಿರ್ಧರಿಸಬೇಕು. ತಾವು ಹೇಗೆ ಅಪ್ಪಣೆ ಮಾಡಿದರೆ ಹಾಗೆ ಮಾಡಲು ನಾನು ಸಿದ್ಧನಾಗಿದೇನೆ."

"ನನಗೇನೋ, ಈ ಪರಿಸ್ಥಿತಿಯಲ್ಲಿ ನಾವು ದುರ್ಗವನ್ನು, ಈ ಸಂಧಾನದ ನೆಪದಿಂದ ಕೆಣಕದಿದ್ದರೇ ಚೆನ್ನಾಗುತ್ತಿತ್ತೆಂದು ತೋರುತ್ತದೆ ಜುಲ್‌ಫಿಕಾರ್."

"ಏಕೆ ?"

"ಈ ಸಮಯದಲ್ಲಿ ಅವರ ಸ್ನೇಹ ನಮಗೆ ಅತ್ಯಂತ ಅಗತ್ಯವಾದುದು ಅಲ್ಲವೆ ?"

"ಅಂದರೆ – ಅವರ ಸ್ನೇಹವಿಲ್ಲದೆ, ನಾವು ಬದುಕಲಾರೆವು ಎಂಬಷ್ಟು ದುರ್ಬಲವಾಗಿದೆಯೇ, ನಮ್ಮ ಬಲ ?"

"ಇದು ನಮ್ಮ ಬಲಾಬಲದ ಪ್ರಶ್ನೆಯಲ್ಲ, ಜುಲ್‌ಫಿಕಾರ್. ಪ್ರಬಲ ವೈರಿಯೊಬ್ಬನು, ನಮ್ಮ ವಿರುದ್ಧ ದಾಳಿ ಮಾಡಬರುವ ಸಮಯದಲ್ಲಿ ತಟಸ್ಥ ರಾಗಿರುವವರನ್ನು ವೈರಿಗಳನ್ನಾಗಿ ಮಾಡಿಕೊಳ್ಳುವುದು ಉಚಿತವಾಗಲಾರದು. ಅದರಿಂದಾಗಿ ಯೋಚಿಸಬೇಕಾಗಿದೆ. ದುರ್ಗದವರಿಗೆ ಬೆದರಿಕೆಯನ್ನು ಹಾಕಿ,

ಆಗತ್ಯವೊದಗಿದಲ್ಲಿ, ಅವರ ಸ್ನೇಹ – ನೆರವು ಕೇಳುವ ಮಾರ್ಗವನ್ನು ನಾವಾಗಿಯೇ ಮುಚ್ಚಿಕೊಂಡೆವೇನೋ ಎಂದು ನಾನು ಚಿಂತಿಸುತ್ತಿದ್ದೇನೆ."

" ಅಂದರೆ – ಈಗ ಏನು ಮಾಡಬೇಕೆಂದು ನಿಮ್ಮ ಅಭಿಪ್ರಾಯ ?"

" ಏನು ಮಾಡುವುದೋ ನನಗಂತೂ ತೋಚಲಿಲ್ಲ. ಸುತ್ತಲೂ ಕತ್ತಲೆ ಕೋಟೆ ಕಟ್ಟಿದಂತಿದೆ....' ಎಂದು ಚಿಂತಾಪರನಾಗಿ ಅತ್ತಿಂದಿತ್ತ ಅಡ್ಡಾಡುತ್ತಿದ್ದು, ಬಳಿಕ ಮತ್ತೇನೋ ಯೋಚನೆ ಹೊಳೆದು, ನಿಂತು —

" ಅಂದಹಾಗೆ, ನಿನಗೆ ಹೇಳಿದ ಮೆಹರ್‌ಬಾನುವಿನ ವಿಷಯ ಏನಾಯಿತು ?"

—ಎಂದು ಕೇಳಿದ ಖಾಸಿಂಖಾನ್.

ಮೆಹರ್‌ಬಾನುವಿನ ಹೆಸರು ಕೇಳುತ್ತಿದ್ದ ಹಾಗೇ ಜುಲ್‌ಫಿಕಾರ್ ಖಾನನ ಮೊಗ ಕೆಂಪೇರಿ, ಮರುಗಳಿಗೆಯೇ ಬಿಳಚಿಕೊಂಡು, ತುಸು ಕರ್ಕಶವಾದ ಧ್ವನಿಯಲ್ಲಿ ಹೇಳಿದ —

" ಆಕೆ ನಾವು ಅಂದುಕೊಂಡಂಥ ಹೆಣ್ಣಲ್ಲ."

" ಅಂದರೆ – ?"

—ಜುಲ್‌ಫಿಕಾರ್ ಖಾನನ ಮಾತು ಕೇಳಿ ಚಕಿತನಾಗಿ ಕೇಳಿದ ಖಾಸಿಂ ಖಾನ್ —

" ಆಕೆ, ದುರ್ಗದಲ್ಲಿ ನಮ್ಮ ಗೂಢಚಾರಿಣಿಯಾಗಿ ಕೆಲಸ ಮಾಡಲು ನಿರಾಕರಿಸಿದಳೆ ?"

" ಅಹುದು."

" ಹಾಗೇ – ನಾವು ಆಕೆಗೆ ಹೇಳಿದ ವಿಷಯವನ್ನೆಲ್ಲಾ, ನಾವು ಹೇಳಿದಂತೆಯೇ ತಿಳಿಸಿದೆಯಾ ? ಆಕೆಯ ಸಹಕಾರದ ಮೇಲೆ ಈ ಸೀಮೆಯಲ್ಲಿ ಮುಸ್ಲಿಮರ ಅಳಿವು – ಉಳಿವು ಅವಲಂಬಿಸಿದೆ ಎಂಬುದನ್ನು ಮನವರಿಕೆ ಮಾಡಿಕೊಡಲಿಲ್ಲವೇ ?"

" ಅದೆಲ್ಲವನ್ನೂ ಹೇಳಿದ್ದಾಯಿತು. ಅದರಿಂದ ನಾವು ಆಕೆಯ ದೃಷ್ಟಿಯಲ್ಲಿ ತುಚ್ಛವಾದುದೊಂದೇ ಅಲ್ಲದೆ ಬೇರಾವ ಪರಿಣಾಮವೂ ಆಗಲಿಲ್ಲ. ನಾನೂ ಹೇಳುವಷ್ಟನ್ನೆಲ್ಲಾ ಹೇಳಿದೆ ಖಾವಿಂದ್. ಕೊನೆಯಲ್ಲಿ ಆಕೆ ' ನಾನೆಂದೂ ನಿಮ್ಮ ಗೂಢಚಾರಿಣಿಯಾಗಲಾರೆ. ಯಾವ ಸಾಮ್ರಾಜ್ಯ

ಕ್ಕಾಗಿಯೂ ಬೆಲೆವೆಣ್ಣಾಗಲಾರೆ. ನಾನು ಮಾಡಬಹುದಾದದಿಷ್ಟೆ – ದುರ್ಗದವರು ನಿಮ್ಮ ಮಿತ್ರರಾಗುವಂತೆ ಪ್ರಯತ್ನಿಸುತ್ತೇನೆ. ಇದನ್ನು ದಿವಾನ್ ಸಾಹೇಬರಿಗೆ ತಿಳಿಸಿ' ಎಂದು ಮಾತು ಮುಗಿಸಿದಳು........ಮೆಹರ್‌ಬಾನು ಸಾಮಾನ್ಯ ಹೆಣ್ಣಲ್ಲ ಖಾವಿಂದ್, ಕೋಟಿಗೊಬ್ಬರೂ ಅಂಥವರು ಅಪರೂಪ"

—ಕೊನೆಯ ಮಾತನ್ನು ನಿಟ್ಟುಸಿರಿನಲ್ಲಿ ತೋಯಿಸಿ ಹೇಳಿದ ಜುಲ್ಫಿಕಾರ್ ಖಾನ್.

"ಹಾಗೆಂದಳೇ....ಮೊದಲಾಗಿದಿದ್ದರೆ ಆ ನಮುಕ್ ಹರಾಮ್ ಹೆಣ್ಣನ್ನು ಕತ್ತರಿಸಿ ನಾಯಿಗೆ ಹಾಕು ಎನ್ನುತ್ತಿದ್ದೆ....ಈಗ....ಈಗ...."

"ಈಗ....?"

"ಈಗ ನಾನೇನೂ ಹೇಳಲಾರೆ ಜುಲ್ಫಿಕಾರ್....ಹೋಗು....ಎರಡು ದಿನ ವಿಶ್ರಾಂತಿ ತೆಗೆದುಕೊಂಡು, ರಾಯದುರ್ಗದ ಗಡಿಯ ಕಡೆಗೆ ನಮ್ಮ ಸೇನೆಗಳೊಂದಿಗೆ ಹೊರಡಲು ಸಿದ್ಧನಾಗಬೇಕು. ಈ ಪುಂಡ ಮರಾಟರ ಗದ್ದಲ ಮುಗಿದ ಬಳಿಕ, ಚಿತ್ರದುರ್ಗದವರ ಯೋಚನೆ ಮಾಡೋಣ"

ಎಂದು ಹೇಳಿ ಖಾಸಿಂಖಾನ್ ಜುಲ್ಫಿಕಾರ್ ಖಾನನನ್ನು ಬೀಳ್ಕೊಟ್ಟ.

೪

ಇತ್ತ —

ಮೆಹರ್‌ಬಾನುವಿನ ಮನಸ್ಸು ಅಶಾಂತಿಯ ಸಾಗರದಲೆಗಳ ಹೊಡೆತಕ್ಕೆ ಸಿಕ್ಕಿ ಪ್ರಕ್ಷುಬ್ಧವಾಗಿತ್ತು. ಸೀರ್ಯದ ನಿಯೋಗದೊಂದಿಗೆ ಚಿತ್ರದುರ್ಗದ ಆಸ್ಥಾನಕ್ಕೆ ಬಂದ ಬಳಿಕ, ತನ್ನ ಬಾಳಿನ ಬುನಾದಿಯೇ ಸಡಿಲವಾಗಿ ಹೊಯ್ದಾಡುತ್ತಿದೆಯೇನೋ ಎನಿಸಲಾರಂಭಿಸಿತ್ತು.

ಎಲ್ಲಕ್ಕೂ ಮೊದಲು ಆಕೆಯ ಚಿತ್ತದ ಶಾಂತಿಯನ್ನು ಕಲಕಿದವನು, ಜುಲ್ಫಿಕಾರ್ ಖಾನ್.

"ಮೆಹರ್, ತೆಗೆದುಕೋ. ಇದು ಹೂವಲ್ಲ, ನನ್ನ ಹೃದಯ"

—ಎಂದು ಆತ, ಆಕೆಯ ಹೃದಯದ ಶಾಂತಿಯನ್ನು ಕಲಕಿ, ಅಶಾಂತಿಯ ಕಿಚ್ಚನ್ನು ಹೊತ್ತಿಸಿದ್ದ.

ಆತ ತನ್ನ ಮೇಲೆ ಹೊರಿಸಿದ ರಾಜಕಾರ್ಯವನ್ನು ನಿರ್ವಹಿಸಿ, ಚಿತ್ರದುರ್ಗದಿಂದ ಕೆಳದಿಯತ್ತ ಹೊರಟು, ಅದರೊಂದಿಗೆ ಇದೆಲ್ಲವನ್ನು ಮರೆತುಬಿಡಬೇಕೆಂದು ನಿಶ್ಚಯಿಸಿದ್ದಳು ಮೆಹರ್‌ಬಾನು.

ರಾಜಕಾರ್ಯ ಮುಗಿದಿತ್ತು —

ದುರ್ಗದ ನಾಯಕರು ತನಗೆ ನೀಡಿದ ಸ್ನೇಹದ ಉಡುಗೊರೆಯ ವಾರ್ತೆಯನ್ನು ಸೀರ್ಯದ ದಿವಾನ್-ಫೌಜುದಾರರಿಗೆ ಕಳಿಸಿಯಾಗಿತ್ತು.

ಆದರೆ ಆ ಬಳಿಕಲೂ ಆಕೆಯ ಹೃದಯಕ್ಕೆ ಶಾಂತಿಮಾತ್ರ ದೊರೆತಿರಲಿಲ್ಲ.

ಆ ಕೆಲಸ ಮುಗಿಯಿತಲ್ಲ ಎಂದ ಹೊತ್ತಿನಲ್ಲಿ, ಈ ವಿಚಿತ್ರ ವಿದೇಶಿ, ಬಿರುಗಾಳಿಯಂತೆ ಆಕೆಯ ಬಾಳನ್ನು ಪ್ರವೇಶಿಸಿದ್ದ.

ನಿಜ —

ಈ ವಿದೇಶಿ, ಜುಲ್‌ಫಿಕಾರ್ ಖಾನನ ಹಾಗೆ ಆಕೆಯಿಂದ ಪ್ರಣಯಯಾಚನೆಯನ್ನು ಮಾಡಿರಲಿಲ್ಲ; ಹೃದಯ ಭಿಕ್ಷೆಯನ್ನು ನೀಡಲೂ ಮುಂದಾಗಿರಲಿಲ್ಲ. ಆಕೆಯ ಬಗ್ಗೆ ತನ್ನ ಹೃದಯದಲ್ಲಿ ಪ್ರೇಮವಿದೆ ಎಂಬ ಸುಳಿವು - ಸೂಕ್ಷ್ಮವನ್ನು ತೋರಿಸಲಿಲ್ಲ.

ಆದರೂ, ಏಕೋ ಮೆಹರ್‌ಬಾನುವಿನ ಹೃದಯ ಅವನಿಗಾಗಿ ವಿಹ್ವಲವಾಗಿತ್ತು. ಅವಳ ಕಣ್ಣುಗಳು ಆತನ ದರ್ಶನಾಕಾಂಕ್ಷೆಯಿಂದ ಕಾತರಿಸುತ್ತಿದ್ದವು.

**ಆ ವಿದೇಶಿಯ —**

ಧೀರ ಗಂಭೀರ, ದೃಢಕಾಯ; ತೆಳುವಾಗಿ, ಕೊಂಚ ನೀಳವಾದ, ಗಂಡುತನವನ್ನು ಸಾರುವ ಮುಖಮುದ್ರೆ ; ಆತನ ನೀಲನೇತ್ರಗಳಲ್ಲಿ ನಿತ್ಯನಿವಾಸಿಯಾಗಿದ್ದ ಯಾತನೆ —

ಆ ಯಾತನೆಯ ಹಿಂದೆ ಹುದುಗಿದ ಆತನ ಬಾಳಿನ ದುರಂತ ಕಥೆ —

ಇವೆಲ್ಲವೂ ನೆನಪಾದಾಗ, ಮೆಹರ್‌ಬಾನುವಿಗೆ ತಾನು ಕುಳಿತ ಆಸನ ಉರಿ ಏರಿದಂತೆ ಭಾಸವಾಗಿ, ಅಲ್ಲಿಂದ ಎದ್ದು ಹೋಗಿ, ಆತನನ್ನು ತನ್ನ ತೋಳ ತೆಕ್ಕೆಯಲ್ಲಿ ತಬ್ಬಿಕೊಂಡು, ತನ್ನ ಎದೆಯ ಮೇಲೆ ಆತನ ದುಃಖದ ಹೊರೆಯನ್ನು ಹೊರಬೇಕು ಎನಿಸುತ್ತಿತ್ತು.

ಈ ಬಗೆಯ ಭಾವನೆಗಳು ಆಕೆಯ ಹೃದಯದಲ್ಲಿ ಮಿಡಿದಾಗ, ಒಮ್ಮೊಮ್ಮೆ ಆಕೆಗೆ ತನ್ನ ಬಗ್ಗೆಯೇ

"ಛಿ, ನಾನೆಂಥ ದುರ್ಬಲ ಚಿತ್ತೆ"

—ಎನಿಸಿ ಹೇಸಿಗೆಯಾಗುತ್ತಿತ್ತು.

ಮತ್ತೊಮ್ಮೆ ತನ್ನ ಸಂಗೀತದ ಗುರುಗಳಾದ ನಿಸ್ಸಾರ್ ಸಾಹೇಬರು ಹೇಳಿದ —

"ಹೆಣ್ಣು, ಅದರಲ್ಲಿಯೂ ರೂಪವತಿಯಾದ ಹೆಣ್ಣು, ಬಹು ದಿನ ಕಲೋಪಾಸಕಳಾಗಿಯೇ ಉಳಿಯುವುದು ಸಾಧ್ಯವಿಲ್ಲ. ಬಹುಬೇಗ, ಸಂಗೀತಕ್ಕಿಂತಲೂ ತನ್ನ ಸೌಂದರ್ಯಕ್ಕೇ ಹೆಚ್ಚಿನ ಬೆಲೆಯಿದೆ ಎಂಬುದು ಆಕೆಗೆ ಮನವರಿಕೆಯಾಗಿ, ಕಲೆ, ಕಾಮೋತ್ತೇಜಕ ವಸ್ತುವಾಗಿ ಪರಿಣಮಿಸುತ್ತದೆ. ಇಡೀ ಬಾಳನ್ನೇ ಈ ಕಲೆಗೆ ಮೀಸಲಾಗಿಡದೆ, ಈ ವಿದ್ಯೆ ಸಿದ್ಧಿಸುವುದಿಲ್ಲ. ಆದುದರಿಂದ ದೇವರು ನಿನಗೆ ಸೌಂದರ್ಯ ಕೊಟ್ಟಿದ್ದಾನೆ, ಅಷ್ಟು ಸಾಕು. ಸಂಗೀತವನ್ನು ಕಲಿಯಲು ಯತ್ನಿಸಬೇಡ"

—ಎಂದು ಹೇಳಿದ ಎಚ್ಚರಿಕೆಯ ಮಾತು. ಆಕೆಯ ಮನದಲ್ಲಿ ಮಿಡಿದು, ಅದುವರೆಗೂ ತಾನು ಆ ಎಚ್ಚರಿಕೆಯ ಹಿಂದಿದ್ದ ಭಯವನ್ನು ಗೆಲ್ಲಲು ನಡೆಸಿದ ಹೋರಾಟಗಳ ನೆನಪಾಗಿ —

"ಇದೇನಿದು – ನನ್ನ ಇಷ್ಟು ದಿನಗಳ ಹೋರಾಟ ವಿಫಲವಾಯಿತೇ? ಈಗ ಸೋಲಿಸುವವರು ಯಾರೂ ಇಲ್ಲದೆಯೇ, ನಾನೇ ಸೋಲುತ್ತಿದ್ದೇನೆಯೇ?"

— ಎಂಬ ಭಯ ಆಕೆಯನ್ನು ಆವರಿಸುತ್ತಿತ್ತು.

ಆ ಭಯ-ಬಲಿತ ಹೊತ್ತಿನಲ್ಲಿ, ಆ ಭಯ ಸಾರ್ಥಕವಾಗಲು ಅವಕಾಶ ಕೊಡದೆ, ಅದಷ್ಟು ಬೇಗ ದುರ್ಗದ ನಾಯಕರಿಂದ ಅಪ್ಪಣೆಯನ್ನು ಪಡೆದು, ಅಲ್ಲಿಂದ ಹೊರಟುಹೋಗಿ, ಈ ವಿಪತ್ತಿನಿಂದ ಪಾರಾಗಬೇಕೆಂದು ಯೋಚಿಸುತ್ತಿದ್ದಳು

ಆದರೆ —

ಮರುಗಳಿಗೆಯೇ, ಈ ಭೀತಿ, ಪರಿತಾಪ, ಯೋಚನೆಗಳೆಲ್ಲವನ್ನೂ ಮೆಟ್ಟಿ ತುಳಿದು, ಮತ್ತೊಮ್ಮೆ ಆ ವಿದೇಶಿಯನ್ನು ನೋಡಬೇಕೆಂಬ ಆಕಾಂಕ್ಷೆ ಅವಳ ಹೃದಯದಲ್ಲಿ ಪ್ರಜ್ವಲಿಸುತ್ತಿತ್ತು.

‘ ಮತ್ತೊಮ್ಮೆ.......ಮತ್ತೊಮ್ಮೆ.......ಆತ ತನ್ನನ್ನು ಕಾಣಲು ಬರಬಾರದೆ ?’

— ಎಂದು ಹಂಬಲಿಸುತ್ತಿತ್ತು ಅವಳ ಹೃದಯ.

ಆ ವಿದೇಶಿ, ತಾನಾಗಿ ಮತ್ತೆ ಅವಳನ್ನು ಕಾಣುವ ಇಚ್ಛೆಯನ್ನು ವ್ಯಕ್ತಪಡಿಸಿರಲಿಲ್ಲ. ಮೆಹರ್‌ಬಾನುವೇ ಅವನನ್ನು—

‘ ಮತ್ತೊಮ್ಮೆ.......ಬರುತ್ತೀರಲ್ಲವೇ ?’

—ಎಂದು ಕೇಳಿ, ಆತನ ದರ್ಶನಾಕಾಂಕ್ಷೆಯನ್ನು ವ್ಯಕ್ತಪಡಿಸಿದ್ದರೂ, ಆ ಸಮಯದಲ್ಲಿ ಆತ,—

‘ ಆಯಿತು, ಬಿಡುವಾದಾಗ ಬರುತ್ತೇನೆ.’

—ಎಂದು ಹೇಳಿದ್ದರೂ ಮತ್ತೆ ಆ ಕಡೆ ಸುಳಿದಿರಲಿಲ್ಲ.

‘ ಆತ ಇಂದು ಬರಬಹುದು, ನಾಳೆ ಬರಬಹುದು’ ಎಂಬ ನಿರೀಕ್ಷೆಯಿಂದ ಮೆಹರ್‌ಬಾನು ಒಂದು ವಾರದ ಕಾಲ ಕಾದಳು. ಆದರೂ ಆ ವಿದೇಶಿ ಅವಳನ್ನು ಕಾಣಲು ಬರಲಿಲ್ಲ.

ಆತನ ಈ ಬರದಿರುವಿಕೆಯನ್ನು ಕಂಡು, ಮೆಹರ್‌ಬಾನುವಿಗೆ—

‘ ಛಿ – ಇವನೆಂಥ ರೂಕ್ಷ ಮನುಷ್ಯ – ನಾನಾಗಿಯೇ ಕರೆದರೂ ಇವನು ಬರಲಿಲ್ಲವಲ್ಲ ಇಂಥವನಿಗಾಗಿ ನಾನು ಕಾಯುವುದು, ನನ್ನದೇ ತಪ್ಪು.’

—ಎಂದು ವಿದೇಶಿಯ ಬಗ್ಗೆ ಸಿಟ್ಟು ಬರುತ್ತಿತ್ತು ; ತನ್ನ ನಡತೆಯ ಬಗ್ಗೆಯೇ ಬೇಸರವಾಗುತ್ತಿತ್ತು.

“ ಇವನನ್ನು ಕಾದು ಉಪಯೋಗವಿಲ್ಲ. ಅವನಿಂದ ನನಗಾಗಬೇಕಾದುದೇನು ? ನನ್ನ ಬಾಳನ್ನು ಹಾದು ಹೋದ ನೂರಾರು ನೆರಳುಗಳಲ್ಲಿ ಇವನೂ ಒಬ್ಬನು ; ಅಷ್ಟೆ.”

—ಎಂದುಕೊಂಡು ಅವನನ್ನು ಮರೆಯಲು ಯತ್ನಿಸುತ್ತಿದ್ದಳು.

ಆದರೆ ಅದಾವುದೂ ಅವಳ ಹೃದಯದಲ್ಲಿ ಚಿರಕಾಲ ಉಳಿಯುತ್ತಿರಲಿಲ್ಲ. ದಿನದಿನದ ನಿರೀಕ್ಷೆ, ದಿನದಿನದ ನಿರಾಶೆಯಿಂದ, ಅವಳ ಹೃದಯದಲ್ಲಿ ವಿದೇಶಿಯ ಬಗ್ಗೆ ಮೂಡಿದ ಭಾವನೆ ಮಾಸದೆ, ಅದಕ್ಕೆ ಪ್ರತಿಯಾಗಿ, ದಿನದಿನಕ್ಕೆ ಅವಳ ಹೃದಯದ ಬಯಕೆ ಬೆಳೆದು, ಕಾಣದಾದ ವಿದೇಶಿಯ ಮುಖ ಸೂಜಿಗಲ್ಲಿನಂತೆ ಅವಳನ್ನು ಸೆಳೆಯುತ್ತಿತ್ತು. ಆ ಬಯಕೆ ಉಲ್ಬಣಿಸಿದಾಗ, ತಾನೇ ಆತನ ಬರದಿರುವಿಕೆಗೆ ನೂರಾರು ಕಾರಣಗಳನ್ನು ಕಲ್ಪಿಸಿಕೊಂಡು—

'ನಾಳೆ ಬರಬಹುದು'

—ಎಂಬ ಭರವಸೆಯನ್ನು ಮೂಡಿಸಿಕೊಂಡು ದಿನ ದೂಡುತ್ತಿದ್ದಳು.

ವಿದೇಶಿಯನ್ನು ಮತ್ತೆ ನೋಡುವ ನಿರೀಕ್ಷೆ ಅವಳನ್ನು ಚಿತ್ರದುರ್ಗದ ನೆಲಕ್ಕೆ ಬಿಗಿದಿತ್ತು.

ಅವಳಿಗೆ ಆ ನಿರೀಕ್ಷೆ—

ಆದರೆ ಅವಳ ತಾಯಿಗೆ ಮಾತ್ರ ಚಿತ್ರದುರ್ಗದಲ್ಲಿರುವುದು ಬೇಸರವಾಗಿತ್ತು. ದಿನದಿನವೂ ಆಕೆ ಮೆಹರ್‌ಬಾನುವಿಗೆ—

"ಇಲ್ಲಿಯ ನಮ್ಮ ಕೆಲಸ ಆಯಿತಲ್ಲ. ಇನ್ನೂ ಇಲ್ಲಿದ್ದೇನು ಮಾಡುವುದಿದೆ ಮೆಹರ್. ಇನ್ನಾದರೂ ಹೊರಡುವ ಯೋಚನೆ ಮಾಡು."

—ಎಂದು ಹೇಳುತ್ತಿದ್ದಳು.

"ಹೂಂ ರಾಜಾಸಾಹೇಬರಿಗೆ ಹೇಳಿಕಳಿಸಿ, ರಹದಾರಿ ತರಿಸುತ್ತೇನೆ."

—ಎನ್ನುತ್ತಿದ್ದಳು ಮೆಹರ್, ತಾಯಿ ಆ ಪ್ರಶ್ನೆಯನ್ನು ಕೇಳಿದಾಗ.

ಅವಳು ಬಾಯಲ್ಲಿ ಹಾಗೆಂದರೂ, ರಹದಾರಿಯನ್ನು ತರಿಸಲು ಏನೂ ಪ್ರಯತ್ನ ಮಾಡುತ್ತಿಲ್ಲವೆಂಬುದು ಬಹುಬೇಗ ಮೆಹರ್‌ಬಾನುವಿನ ತಾಯಿಗೆ ಅರಿವಾಯಿತು.

ಮೆಹರ್‌ಬಾನು ತನ್ನ ಹೃದಯದಲ್ಲಾಗುತ್ತಿದ್ದ ಆಂದೋಲನದ ಸುಳಿವು, ತನ್ನ ತಾಯಿಗೆ ಹತ್ತದಂತೆ ಎಷ್ಟೇ ಎಚ್ಚರವಾಗಿದ್ದರೂ, ಜೀವನದಲ್ಲಿ ನುರುಪಡಿಯಾದ ಆಕೆಗೆ, ತನ್ನ ಮಗಳಲ್ಲಾಗುತ್ತಿದ್ದ ಪರಿವರ್ತನೆ ಅರಿವಾಗಿ, ಆಕೆ ತನ್ನ ಮಗಳ ಭವಿಷ್ಯದ ಬಗ್ಗೆ ಬೆದರತೊಡಗಿದಳು. ಆ ಬಗ್ಗೆ ತನ್ನ ಮಗಳನ್ನು ಎಚ್ಚರಿಸಬೇಕೆಂದು ಆಕೆಗೆ ಅನಿಸಿದರೂ ಸೂಕ್ಷ್ಮಮತಿಯಾದ ಮೆಹರ್‌ಬಾನು ತಾನಾಗಿಯೇ ಆ ವಿಷಯವನ್ನು ಎತ್ತದೆ, ತಾನು ಆ ವಿಷಯವನ್ನು ಎತ್ತುವುದು ಹೇಗೆ ಎಂದು ಚಿಂತಿಸುತ್ತಿದ್ದಳು. ಆ ವಿಷಯವನ್ನು ನೇರವಾಗಿ ಪ್ರಸ್ತಾಪಿಸಲಾಗದ ಆಕೆ, ತನ್ನ ಮನಸ್ಸಿನ ದುಗುಡವನ್ನು, ದಿನದಿನವೂ ತನ್ನ ಮಗಳನ್ನು—

'ಎಂದು ಇಲ್ಲಿಂದ ಹೊರಡುವುದು?'

—ಎಂಬ ಪ್ರಶ್ನೆಯಲ್ಲಿ ವ್ಯಕ್ತಪಡಿಸುತ್ತಿದ್ದಳು.

ಮೆಹರ್‌ಬಾನು ಹೊರಡುವ ದಿನವನ್ನು ಮುಂದೆ ದೂಡಿದಷ್ಟೂ ಆಕೆಯ ದುಗುಡ ಬೆಳೆಯುತ್ತಿತ್ತು. ಕೊನೆಗೊಂದು ದಿನ ಆಕೆ, ತನ್ನ ಹೃದಯದ

ಬೇಗುದಿಯನ್ನು ಸಹಿಸಲಾರದೆ, 'ಆಗಿದ್ದಾಗಲಿ, ಇದನ್ನು ಕೊನೆ ಮುಟ್ಟಿಸಿಯೇ ಬಿಡಬೇಕು' ಎಂಬ ನಿಶ್ಚಯದಿಂದ, ತಾನಾಗಿಯೆ, ಎಂದು ದುರ್ಗದಿಂದ ಹೊರಡುವ ಮಾತನ್ನು ಎತ್ತದಿದ್ದ ಮೆಹರ್ ಬಾನುವಿನ ಇದುರಿಗೆ ಆ ಮಾತನ್ನಾಡಿದಳು.

ಆ ದಿನ ಸಂಜೆ—

ಸಂಜೆಯ ಸೂರ್ಯ, ಚಿತ್ರದುರ್ಗದ ಗಿರಿಮಾಲೆಯ ಹಿಂದೆ ಅಡಗಿ, ಬೆಟ್ಟದ ಪೂರ್ವ ದಿಗ್ಭಾಗದಲ್ಲೆಡೆಯಲ್ಲೂ ಮಬ್ಬು ಆವರಿಸಿದ್ದರೂ, ಗುಡ್ಡದಾಚೆ ಕಾಣುವ ಮುಗಿಲಿನ ನೀಲಿಮೆಯಲ್ಲಿ, ಕದಡಿದ ಕೆಂಪು ಛಾಯೆ, ಮೋಡಗಳ ಅಂಚಿನಲ್ಲಿ ಹೊಳೆಯುತ್ತಿದ್ದ ಬಂಗಾರದ ಒಪ್ಪ, ಇನ್ನೂ ಅಸ್ತಮಯವಾಗಿಲ್ಲವೆಂಬುದಕ್ಕೆ ಸಾಕ್ಷಿಯಾಗಿದ್ದವು.

ತನ್ನ ನಿವಾಸದಲ್ಲಿ, ವಾತಾಯನದ ಬಳಿಯ ಆಸನದಲ್ಲಿ ಕುಳಿತು ಮೆಹರ್ ಬಾನು ವಾತಾಯನದಿಂದಾಚೆಗೆ ಕಾಣುವ ಸಂಧ್ಯಾನಿಸರ್ಗದ ಸೊಬಗನ್ನು, ಎತ್ತಲಿಂದಲೋ ಹಾರಿಬಂದು ಚಿಲಿಪಿಲಿಗುಟ್ಟುತ್ತಾ, ಮರಗಳಲ್ಲಿದ್ದ ತಮ್ಮ ಗೂಡುಗಳಿಗೆ ಹಿಂದಿರುಗುತ್ತಿದ್ದ ಹಕ್ಕಿಗಳನ್ನು ನೋಡುತ್ತಾ ಕುಳಿತ್ತಿದ್ದಳು.

ಒಂದೊಂದಾಗಿ, ನಾಲ್ಕಾರಾಗಿ, ಗುಂಪು ಗುಂಪಾಗಿ, ಹಕ್ಕಿಗಳು, ತಮಗಾಗಿ ಕಾಯುತ್ತಿದ್ದ ತಮ್ಮ ಎಳೆವನಗಳಿಗೆ ಹಿಂತಿರುಗುತ್ತಿದ್ದವು.

ಆ ಹಕ್ಕಿಗಳನ್ನು ನೋಡ ನೋಡುತ್ತಾ ಮೆಹರ್ ಬಾನುವಿನ ಹೃದಯ ಭಾರವಾಗಿ, ಸಂಜೆಯ ಮಬ್ಬು ಅವಳ ಮನಸನ್ನು ವ್ಯಾಪಿಸಿತು.

ಎಲ್ಲ ಹಕ್ಕಿಗಳೂ ತಮ್ಮ ತಮ್ಮ ಗೂಡುಗಳಿಗೆ ಹಿಂದಿರುಗುತ್ತಿವೆ—.

ಕಳೆದ ಎಷ್ಟೋ ಸಂಜೆಗಳಂತೆಯೇ, ಈ ಸಂಜೆಯೂ ಕ್ರಮೇಣ ಕತ್ತಲ ಕಡಲಿನಲ್ಲಿ ಕರಗಿ ಹೋಗುತ್ತಿದೆ.

ಆದರೆ ಮೆಹರ್ ಬಾನು, ದಿನದಿನ ಸಂಜೆಯೂ ನಿರೀಕ್ಷಿಸುತ್ತಿದ್ದ ಹಕ್ಕಿ ಮಾತ್ರ, ಅದನ್ನು ನಿರೀಕ್ಷಿಸುತ್ತಿದ್ದ ಗೂಡಿಗೆ ಹಿಂದಿರುಗಲಿಲ್ಲ.

ಹಕ್ಕಿಗಳನ್ನು ನೋಡು ನೋಡುತ್ತಾ ತನ್ನ ಹೃದಯದಲ್ಲಿ ಮೂಡಿದ ಆ ಭಾವನೆಯೊಂದಿಗೆ, ಭಾರವಾದ ನಿಟ್ಟುಸಿರು ಅವಳ ಮುಖದಿಂದ ಹೊರಬಿದ್ದು, ಆ ಭಾವನೆಯ ಭಾರವನ್ನು ಹೊತ್ತು ಕುಳಿತಿರುವುದು ಅಸಾಧ್ಯವಾಗಿ,

ಮೇಲೆದ್ದು, ಹೊರಗೆ ನಿಧಾನವಾಗಿ ಹಬ್ಬುತ್ತಿದ್ದ ಕತ್ತಲನ್ನೇ ನೋಡುತ್ತಾ ನಿಂತಳು.

ಹೊರಗಿನ ಕತ್ತಲೇ ಅವಳ ಹೃದಯವನ್ನು ವ್ಯಾಪಿಸುತ್ತಿತ್ತು.

ಮಗಳು ಮಾಡುತ್ತಿದ್ದುದನ್ನೆಲ್ಲಾ ಸುಮ್ಮನೆ ಕುಳಿತು ನೋಡುತ್ತಿದ್ದ ಅವಳ ತಾಯಿ, ಕೊನೆಗೆ ಆ ಮೌನವನ್ನು ಮುರಿದು,

" ಮೆಹರ್ "

—ಎಂದು ಕೂಗಿದಳು.

" ಏನು ಮಾ ?"

—ನಿಂತಲ್ಲಿನಿಂದಲೇ, ತಾಯಿಯತ್ತ ತಿರುಗಿ ನೋಡದೆಯೇ ಕೇಳಿದಳು ಮೆಹರ್‌ಬಾನು.

" ಇಲ್ಲಿ ಬಾ ಮೆಹರ್........"

ಆಕೆಯ ಮಾತಿನಂತೆ, ಮೆಹರ್‌ಬಾನು ವಾತಾಯನದತ್ತಣಿಂದ ಭಾರವಾದ ಹೆಜ್ಜೆ ಹಾಕುತ್ತಾ ನಡೆದು ಬಂದು ತನ್ನ ತಾಯಿಯ ಬಳಿ, ನೆಲದ ಮೇಲೆ ಕುಳಿತು ಕೇಳಿದಳು—

" ಏನು ಮಾ ?"

"ಈಗೆರಡು ದಿನದಿಂದ ನಿನ್ನನ್ನು ಒಂದು ಮಾತು ಕೇಳಬೇಕು ಎನಿಸುತ್ತಿದೆ........ಕೇಳಲೇ ?"

ತಾಯಿಯ ಪ್ರಶ್ನೆಯನ್ನು ಕೇಳಿ ಮೆಹರಳ ಹೃದಯ ದಿಗ್ಗನೆ ಪುಟಿದಂತಾಯಿತು. ಹೃದಯದ ಉದ್ರೇಕ ಧ್ವನಿಯಲ್ಲಿ ವ್ಯಕ್ತವಾಗದಂತೆ ತಡೆಹಿಡಿಯುತ್ತಾ ಹೇಳಿದಳು ಮೆಹರ್‌ಬಾನು—

" ಏನು ಕೇಳು ?"

ತನ್ನ ಬಳಿಯಿದ್ದ ಮೆಹರ್‌ಬಾನುವಿನ ಮೊಗವನ್ನು ತನ್ನ ತೊಡೆಗೆ ಒತ್ತಿಕೊಂಡು, ಅವಳ ತಲೆಗೂದಲನ್ನು ಮೃದುವಾಗಿ ನೇವರಿಸುತ್ತಾ—

" ಈಗೆರಡು ದಿನದಿಂದ ನಿನಗೇನಾಗಿದೆ ಮೆಹರ್ ?"

—ಎಂದು ಕೇಳಿದಳು.

" ನನಗೆ........ನನಗೇನಾಗಿದೆ ?........ಏನೂ ಆಗಿಲ್ಲವಲ್ಲ........"

" ನಾನು ನಿನ್ನ ತಾಯಿ, ನಾನು ಇಂದು ಬದುಕಿರುವುದೇ ನೀನು ಸುಖವಾಗಿರುವುದನ್ನು ನೋಡಲು, ಅಂಥ ನನಗೂ ಸುಳ್ಳು ಹೇಳುತ್ತೀಯಾ,

ಮೆಹರ್? ನಿನಗಾಗಿರುವುದನ್ನು ನೀನು ನನ್ನ ಕಣ್ಣುಗಳಿಗೆ ಕಾಣದಂತೆ ಮುಚ್ಚಿಟ್ಟರೂ, ಅದು ನನ್ನ ಕರುಳಿಗೆ ಅರಿವಾಗುವುದಿಲ್ಲವೇ? ನನ್ನಲ್ಲಿ ಮುಚ್ಚುಮರೆ ಮಾಡಬೇಡ ಮಗಳೇ—ಹೇಳು, ದುರ್ಗದಲ್ಲಿ ನೀನಾರಿಗಾಗಿ ಕಾಯುತ್ತಿದೀಯಾ?"

—ಬಹು ಕೋಮಲವಾದ ಸ್ವರದಲ್ಲಿ ಕೇಳಿದಳು ಮೆಹರ್‌ಬಾನುವಿನ ತಾಯಿ.

"ಉಹೂ........ನಾನು........ಇಲ್ಲಿ ಯಾರಿಗಾಗಿಯೂ ಕಾಯುತ್ತಿಲ್ಲ ...........ಮೈಗೆ ಏಕೋ ಅಲಸಿಕೆಯಾಗಿದೆ...........ಅದಕ್ಕಾಗಿ ತಡಮಾಡು ತ್ತಿದ್ದೇನೆ........"

"ಹುಚ್ಚಿ, ಹುಚ್ಚಿ........ಇಷ್ಟು ಸುಲಭವಾಗಿ ಸುಳ್ಳು ಹೇಳಿ ನನ್ನನ್ನು ವಂಚಿಸಬಹುದು ಎಂದು ತಿಳಿದೆಯಾ ಮೆಹರ್........ನಾನು ನಿನ್ನ ತಾಯಿ, ನಿನಗಿಂತಲೂ ವಯಸ್ಸಾದ ಹೆಣ್ಣು........ನೀನು ಇಂದು ಏನನ್ನು ಅನುಭವಿಸು ತ್ತಿರುವೆಯೋ ಅದನ್ನು ನಾನೂ ಒಮ್ಮೆ, ನನ್ನ ಬಾಳಿನಲ್ಲೇ ಅನುಭವಿಸಿದ್ದೇನೆ ಮೆಹರ್........ಅಕಾರಣವಾದ ನಿಟ್ಟುಸಿರು............ಗಳಿಗೆಗೊಮ್ಮೆ ಬಾಗಿಲು ನೋಡುವುದು........, ಜಗತ್ತೇ ಮುಳಿಗಿದಂತೆ, ತಲೆಕೆಳಗು ಮಾಡಿ ನಡೆಯು ವುದು........ಇವೆಲ್ಲಾ ಯಾವ ಜಾಡ್ಯದ ಲಕ್ಷಣ ಎಂದು ನಾನು ಕಾಣೆನೇ ಮೆಹರ್?........ಒಮ್ಮೆ........ನಿನ್ನ ತಂದೆಗಾಗಿ ನಾನೂ ಇದೆಲ್ಲವನ್ನೂ ಅನು ಭವಿಸಿದ್ದೇನೆ........ಕೈ ಸುಟ್ಟುಕೊಂಡವನಿಗೆ ಬೆಂಕಿಯ ಝಳ ಎಂದರೇನೆಂದು ತಿಳಿಯದೆ?..........ಹೇಳು ಬೇಟಿ, ನಿನಗೆ ಯಾರು ಈ ಹುಚ್ಚು ಹಿಡಿಸಿದರು?"

—ವಿಷಣ್ಣತೆ, ಮಮತೆಗಳು ಸಮಸಮವಾಗಿ ಬೆರೆತಧ್ವನಿಯಲ್ಲಿ ಕೇಳಿ ದಳು ಮೆಹರಳ ಮಾತೆ. ಆಕೆಯ ಮಾತನ್ನು ಕೇಳಕೇಳುತ್ತಾ ಮೆಹರಳ ಹೃದ ಯದಲ್ಲಿ ಘನೀ ಭೂತವಾಗಿದ್ದ ಎಂಥದೋ ಭಾವನೆ, ಕರಗಿ ಕಣ್ಣೀರಾಗಿ ಹರಿಯತೊಡಗಿತು. ತಾಯಿಯ ಪ್ರಶ್ನೆಗೆ ಏನೂ ಉತ್ತರ ಕೊಡದೆ, ಆಕೆಯ ತೊಡೆಯಲ್ಲಿ ಮುಖ ಹುದುಗಿಸಿ, ನೀರವವಾಗಿ ರೋದಿಸಿದಳು. ಅವಳ ಕಣ್ಣೀರಿನ ಕಾರಣವನ್ನು ಕೇಳಿ ಅವಳ ದುಃಖವನ್ನು ಮತ್ತಷ್ಟು ಹೆಚ್ಚಿಸಲು ಇಚ್ಛಿಸದೆ, ಅವಳ ತಾಯಿ, ಏನೊಂದೂ ಮಾತನಾಡದೆ, ತನ್ನ ತೊಡೆಯ ಮೇಲೆ ಒರಗಿದ ಮೆಹರಳ ನೆತ್ತಿಯನ್ನು, ಆಕೆಯ ಬೆನ್ನನ್ನು ನೇವರಿಸುತ್ತಾ ಕುಳಿತಿದ್ದಳು.

ಅವರಿಬ್ಬರೂ ಹಾಗೆ ಕುಳಿತಿರುವಾಗಲೇ, ದಾಸಿ ಹೊತ್ತಿಸಿದ ದೀಪವನ್ನು ತಂದಳು. ಆ ಹೊತ್ತಿನಲ್ಲಿ ಮೌನವಾಗಿ ಉರಿಯುವ ದೀಪವೂ ತಮ್ಮ ಏಕಾಂತತೆಗೆ ಭಂಗ ತರಬಹುದೆಂದು ಊಹಿಸಿ, ಮೆಹರಳ ತಾಯಿ, ದಾಸಿಗೆ ದೀಪವನ್ನು ಅಲ್ಲಿಂದ ಕೊಂಡೊಯ್ಯುವಂತೆ ಸೂಚನೆ ಮಾಡಿದಳು.

ಕ್ಷಣಕಾಲ ಆ ಕೋಣೆಯನ್ನು ಪ್ರವೇಶಿಸಿದ ಬೆಳಕು ಹೊರಟುಹೋಗಿ, ಕೋಣೆಯಲ್ಲಿ ಕತ್ತಲು ಹಬ್ಬಿತು. ಕಿಟಕಿಯಾಚೆ, ಕ್ಷೀಣವಾದ ಬೆಳದಿಂಗಳು, ಗಿಡಮರಗಳಿಗೆ ತೆಳುವಾದ ಬಿಳಿ ಹೊದಿಕೆಯನ್ನು ಹೊದಿಸಿತ್ತು.

ಅಷ್ಟುಹೊತ್ತು ನೀರವವಾಗಿ ರೋಧಿಸಿ, ತನ್ನ ಹೃದಯವನ್ನು ಹಗುರ ಮಾಡಿಕೊಂಡ ಮೆಹರ್, ತಾಯಿಯ ತೊಡೆಯಿಂದ ತನ್ನ ಮೊಗವನ್ನು ಮೇಲೆತ್ತಿ—

" ಮಾ "

—ಎಂದು, ಹೂವಿನೆಸಳಿನ ಸ್ಪರ್ಶದಷ್ಟು ಕೋಮಲವಾದ ಧ್ವನಿಯಲ್ಲಿ ಕರೆದಳು ಮೆಹರ್ ಬಾನು.

" ಏನು ಮೆಹರ್ ?"

" ನನಗೇಕೋ ಭಯವಾಗುತ್ತಿದೆ ಮಾ, ನನ್ನ ಬಾಳಿನ ತಳಹದಿಯೇ ಕಳಚಿಕೊಂಡು ಹೋಗುತ್ತಿರುವಂತೆ ತೋರುತ್ತಿದೆ "

" ಏಕೆ ?"

" ಇಷ್ಟುದಿನ ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ನಡೆದ ನನಗೆ ಈಗೇಕೋ, ಅವರಿಗೆ ನಾನು ಕೊಟ್ಟ ವಚನವನ್ನು ನಡೆಸಲಾರೆನೇನೋ ಎಂದು ದಿಗಿಲಾಗುತ್ತಿದೆ. ಗುರುವಚನವನ್ನು ಉಲ್ಲಂಘಿಸುವುದು ಭಯಂಕರ, ಪಾಪವೇ ಮಾ ?"

" ನಿಜ ಬೇಟಿ, ಗುರುವಚನ, ಖುದಾನ ವಚನವಿದ್ದಂತೆ. ಆದರೆ ನಿನಗೀಗ ಯಾವ ಮಾತನ್ನು ಉಲ್ಲಂಘಿಸುವ ಭಯವಾಗುತ್ತಿದೆ ?"

ತಾಯಿಯ ಮಾತಿಗೆ ಮೆಹರ್ ಬಾನು ಕೂಡಲೇ ಉತ್ತರ ಕೊಡಲಿಲ್ಲ. ಒಂದುಗಳಿಗೆ ತಡೆದು ಬಳಿಕ ಹೇಳಿದಳು—

" ಇದ್ದ ಮಾತನ್ನು ಹೇಳಿದರೆ ನೀನು ನನ್ನನ್ನು ನಾಚಿಕೆಗೇಡಿ ಎಂದು ಬೈಯುವುದಿಲ್ಲವಷ್ಟೆ........?"

" ಉಹೂಂ "

"'ರೂಪವತಿಯಾದ ಹೆಣ್ಣು ಶುದ್ಧ ಕಲೋಪಾಸಕಳಾಗುವುದು ಸಾಧ್ಯವಿಲ್ಲ. ಬಹುಬೇಗ ಕಾಮ, ಪ್ರೇಮಗಳು ಕಲಾಕಾಂಕ್ಷೆಯನ್ನು ಕಬಳಿಸಿಬಿಡುತ್ತವೆ' ಎಂದು ಗುರುಗಳು ಹೇಳುತ್ತಿದ್ದರು. ಆಗ ನಾನು ಅವರಿಗೆ 'ಎಂದೂ ನಾನು ನನ್ನ ಬಾಳಿನಲ್ಲಿ ಕಾಮ – ಪ್ರೇಮಕ್ಕೆ ಅವಕಾಶ ಕೊಡುವುದಿಲ್ಲ' ಎಂದು ಮಾತುಕೊಟ್ಟಿದ್ದೆ.

ಈಗ.... ಈಗ...."

"ಏನು—ಈಗ?"

"ಈಗ ಆ ಮಾತನ್ನು ಉಳಿಸಿಕೊಳ್ಳಲು ನನ್ನಿಂದ ಅಸಾಧ್ಯವೆಂದು ತೋರುತ್ತಿದೆ...."

"ಅಂದರೆ – ನೀನೀಗ ಯಾರನ್ನೋ ಪ್ರೀತಿಸುತ್ತಿದ್ದೀಯ.... ಅಲ್ಲವೆ?"

"ಮೊದಲು ನಾನು ಹಾಗೆ ಪ್ರೀತಿಸುವುದು ಸರಿಯೋ ತಪ್ಪೋ ಎಂದು ತಿಳಿಸಿದರೆ, ನಾನು ಮುಂದಿನ ಮಾತು ತಿಳಿಸುತ್ತೇನೆ."

"ನೋಡು ಮೆಹರ್ – ನಾನು ದೊಡ್ಡ ಪಂಡಿತಳಲ್ಲ, ಜ್ಞಾನಿಯಲ್ಲ, ಹೆಚ್ಚು ಅಭ್ಯಾಸ ಮಾಡಿದವಳಲ್ಲ–ನಾನೊಬ್ಬ ಸಾಮಾನ್ಯ ಹೆಂಗಸು. ಆದ್ದರಿಂದ, ನಾನು ಜ್ಞಾನಶಿಖರದ ತುದಿಯಲ್ಲಿ ನಿಂತು, ಎಲ್ಲವನ್ನೂ ತಿಳಿದವಳಂತೆ ಯಾವ ಮಾತನ್ನೂ ಆಡಲಾರೆ. ಆ ದೃಷ್ಟಿಯಿಂದ ಜಗತ್ತನ್ನು ನೋಡಲಾರೆ. ಕೇವಲ ನನ್ನ ದೃಷ್ಟಿಯಿಂದ, ನನಗೆ ತಿಳಿದದ್ದನ್ನು ಹೇಳಬಲ್ಲೆ...."

"ಹೂ.... ಹೇಳು...."

"ಸಕಲ ಚರಾಚರ ಜಗತ್ತಿನ ಸೃಷ್ಟಿಕರ್ತನಾದ ಭಗವಂತ ಎಷ್ಟರಮಟ್ಟಿಗೆ ಶಾಸನಕರ್ತನೋ ಅಷ್ಟೇಮಟ್ಟಿಗೆ ಪ್ರೇಮಸ್ವರೂಪಿ. ಆ ಪ್ರೇಮಸ್ವರೂಪಿ, ಶಾಶ್ವತ ಆನಂದ ಮೂರ್ತಿಯಿಂದ ಸೃಷ್ಟಿಯಾದ ಈ ಜಗತ್ತಿನ ಜನರೂ ಅವನ ಅಂಶ ಸಂಭೂತರು. ಅವರ ಬಾಳು, ಪ್ರೇಮ, ಆನಂದಕ್ಕೆ ಮುಡಿಪಾಗಬೇಕು. ಹೆಣ್ಣು ಪುರುಷನಲ್ಲಿ, ಪುರುಷ ಸ್ತ್ರೀಯಲ್ಲಿ ಅರಸುವ ಪ್ರೇಮ, ಆನಂದವೂ ಆ ಭಗವಂತನ ಆರಾಧನೆಯೆಂದೇ ನಾನು ತಿಳಿದಿದ್ದೇನೆ. ಸ್ತ್ರೀ ಪುರುಷರ ಪರಸ್ಪರ ಪ್ರೇಮದಲ್ಲಿ, ಆತನ ಸೃಷ್ಟಿಕಾರ್ಯವೇ ಮುಂದುವರಿಯುವುದರಿಂದ, ಅದರಲ್ಲಿ ಪಾಪವಿಲ್ಲವೆಂದೇ ನನ್ನ ಭಾವನೆ...."

"ಆಪರೆ ಆ ಬಗೆಯ ಮೋಹ ಕಲಾವಿದರಿಗೆ ಸಲ್ಲದು ಎಂದು ಗುರುಗಳು ಹೇಳಿದರಲ್ಲಾ...."

"ಅದು ಅವರ ದೃಷ್ಟಿ...."

"ನಿನ್ನ ಅಭಿಪ್ರಾಯ ?...."

—ಕೊಂಚ ಉತ್ಕಂಠಿತಳಾಗಿ ಕೇಳಿದಳು ಮೆಹರ್‌ಬಾನು.

"ಕಲಾವಿದರೇನೂ ಲೋಕಾತೀತರಲ್ಲವಲ್ಲ, ಅವರೂ ಹೆಣ್ಣುಗಂಡುಗಳೇ ತಾನೇ ? ಸಕಲ ಸ್ತ್ರೀ ಪುರುಷರಿಗೂ ಅನ್ವಯಿಸುವ ಭಗವಂತನ ನಿಯಮ ಇವರಿಗೆ ಮಾತ್ರ ಅನ್ವಯಿಸಬಾರದು ಎಂದಿದ್ದರೆ, ಕಲಾವಿದರನ್ನು, ಸ್ತ್ರೀಪುರುಷ ವರ್ಗಕ್ಕೆ ಸೇರದ ಪ್ರತ್ಯೇಕ ವಸ್ತುವಾಗಿಯೇ ಸೃಷ್ಟಿಸುವುದೇನೂ ಆತನಿಗೆ ಅಶಕ್ಯವಾಗಿರಲಿಲ್ಲ. ಯಾವ ರಾಗ, ಭಾವ ವಿಕಾಸವೂ ಇಲ್ಲದ ಶಿಲೆಯನ್ನೇ ಆತ ಕಲಾವಿದರನ್ನಾಗಿ ನಿರ್ಮಿಸುತ್ತಿದ್ದ...."

"ಹಾಗಾದರೆ ಗುರುಗಳು ಹೇಳಿದುದು ತಪ್ಪೇ ?...."

"ತಪ್ಪಲ್ಲ, ನನ್ನ ದೃಷ್ಟಿಯಲ್ಲೇನೋ ಅದೂ ಒಂದು ಭ್ರಾಂತಿ."

"ಏಕೆ ?"

"ನಿನ್ನ ಗುರುಗಳೂ ಪುರುಷರೇ."

"ಅಂದರೆ—?"

"ಪುರುಷರಿಂದಲೇ ಆಳಲ್ಪಡುತ್ತಿರುವ ಈ ಜಗತ್ತಿನಲ್ಲಿ, ಪುರುಷರು, 'ಹೆಣ್ಣು ಮಾಯೆ, ಮುಕ್ತಿಗೆ ಮಾರಕ ಆಕೆಯ ಮೈಗಾಳಿ, ಕಲೆ, ತಪಸ್ಸು ಮೊದಲಾದ ಎಲ್ಲ ಬಗೆಯ ಸಾಧನೆಗಳಿಗೂ ಮಾರಕ' ಎಂಬ ಭಾವನೆಯನ್ನು ಪ್ರಚಾರ ಮಾಡಿದ್ದಾರೆ. ತಾನೊಬ್ಬನೇ ತಪಸ್ಸಿನಿಂದ, ಕಲಾರಾಧನೆಯ ಮೂಲಕ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಬಹುದು ಎಂಬಂತೆ: ಪುರುಷನಷ್ಟೇ ಸ್ತ್ರೀಯೂ ಸಮಾನ ಶಕ್ತಿಯನ್ನುಳ್ಳ ಭಗವಂತನ ಸೃಷ್ಟಿ ಎಂಬ ಸತ್ಯಕ್ಕೆ ಕುರುಡಾಗಿ, ಗಂಡಿಗೆ ಹೆಣ್ಣೂ ಮಾಯೆಯಲ್ಲ, ಹೆಣ್ಣಿಗೆ ಗಂಡೂ ಮಾಯೆಯಲ್ಲ. ಚಿತ್ತದ ದುರ್ಬಲತೆಯೇ, ಹೆಣ್ಣುಗಂಡುಗಳಿಬ್ಬರ ಸಾಧನೆಯನ್ನೂ ಮಣ್ಣುಗೂಡಿಸುವ ಮಾಯೆ. ಹೆಣ್ಣಿನಿಂದ ವಂಚಿತರಾದವರು ಹೆಣ್ಣನ್ನೂ, ಗಂಡಿನಿಂದ ವಂಚಿತರಾದವರು ಗಂಡನ್ನೂ ಹಳಿದು, ತಮ್ಮ ದೌರ್ಬಲ್ಯವನ್ನು ವ್ಯಕ್ತಪಡಿಸುತ್ತಾರೆ, ಬೇಟಿ. ನನಗೇನೋ ಒಂದು ಮಾತು ತೋರುತ್ತದೆ—"

"ಏನು ?"

"ನಿಸರ್ಗ ನಿಯಮಕ್ಕೆ ವಿರುದ್ಧವಾಗಿ ನಡೆಯುವುದೇ ಭಗವತ್-ದ್ರೋಹ. ತೊರೆ ನದಿಯಲ್ಲಿ ಬೆರೆಯುವಂತೆ, ನದಿ ಕಡಲಲ್ಲಿ ಬೆರೆಯುವಂತೆ, ನದಿಯನ್ನುಂಡ ಕಡಲು, ವೃಷ್ಟಿರೂಪವಾಗಿ ಗಿರಿಶಿಖರವನ್ನು ಆಲಂಗಿಸುವಂತೆ, ಸ್ತ್ರೀ ಪುರುಷರ ಪರಸ್ಪರ ಸಖ್ಯವೂ ನಿಸರ್ಗ ನಿಯಮವೇ. ಹಾಗಿಲ್ಲವೆಂದರೆ, ಸಂಸಾರಿಯಾದ ಪೈಗಂಬರ್ ಮಹಮುದರಿಗೆ, ಕಬೀರನಿಗೆ ಭಗವಂತ ಒಲಿದದ್ದು ಹೇಗೆ? ಕೃಷ್ಣನನ್ನು ಪ್ರೀತಿಸಿದ ರಾಧೆ ಪಾಪಿಯಾಗಲಿಲ್ಲವೇಕೆ !"

"ಹಾಗಿದ್ದರೆ....ಹಾಗಿದ್ದರೆ....?"



"ಏನು ?"

"ನಾನಿದುವರೆಗೂ ಒಂಟಿಯಾಗಿದ್ದುದು ನಿನಗೆ ಒಪ್ಪಿಗೆಯಿರಲಿಲ್ಲ....?"

"ನಿಜ. ನಾನೇಕೆ, ಯಾವ ತಾಯಿ ತಾನೇ, ತನ್ನ ಮಗಳು ಒಂಟಿಯಾಗಿ ಬದುಕಿ ಸಾಯುವುದನ್ನಪೇಕ್ಷಿಸುತ್ತಾಳೆ? ನನಗೆ ನೀನು ಎಷ್ಟು ಮುದ್ದಿನ ಮಗಳಾದರೂ, ಅಷ್ಟೇ ಮುದ್ದಾದ ಮೊಮ್ಮಕ್ಕಳ ತಾಯಿಯಾಗಬೇಕೆಂಬ ಆಸೆ ನನಗಿಲ್ಲವೇ? ನನ್ನ ತಾಯ್ತನ ಸಾರ್ಥಕವಾಗುವುದೇ ನೀನು ತಾಯಿಯಾದಾಗ; ನಿನಗೆ ಅನುರೂಪನಾದ ಪತಿ ದೊರೆತು, ನೀನು ಸುಖೀ ಗೃಹಿಣಿಯಾದಾಗ"

—ಖಚಿತವಾಗಿ ಹೇಳಿದಳು ಮೆಹರುಬಾನುವಿನ ತಾಯಿ.

"ಅಂದರೆ........ನಾನು........ವಿವಾಹಿತಳಾಗ ಬಯಸಿದರೆ........ನಿನಗೆ ಬೇಸರವಿಲ್ಲವೆ ?...."



"ಉಹೂಂ."

"ಹಾಗಾದರೆ........ಹಾಗಾದರೆ........ನನ್ನನ್ನು ಸದ್ಗೃಹಿಣಿಯಾಗೆಂದು ಆಶೀರ್ವದಿಸು"

—ಎಂದು ಮೆಹರ್‌ಬಾನು ತಟಕ್ಕನೆ ತನ್ನ ತಾಯಿಯ ಕಾಲು ಹಿಡಿದು ಬೇಡಿದಳು.

ಮಗಳ ಬೇಡಿಕೆಯನ್ನು ಕೇಳಿ ಆ ತಾಯ ಮೈ ರೋಮಾಂಚಿತವಾಯಿತು.

"ಸದ್ಗೃಹಿಣಿಯಾಗು, ಪುತ್ರವತಿಯಾಗು"

—ಎಂದು ಹೃತ್ಪೂರ್ವಕವಾಗಿ ಹರಸಿ, ಬಳಿಕ ಕೇಳಿದಳು ಆ ತಾಯಿ—

"ನಿನ್ನ ಕೈಹಿಡಿಯಲೊಪ್ಪಿರುವ ಆ ಭಾಗ್ಯವಂತನಾರು ಮೆಹರ್ ?"

"ಯಾರೆಂದು ಹೇಳಿದರೆ ನೀನು ಬೇಸರಮಾಡಿಕೊಡುವುದಿಲ್ಲ ತಾನೇ?"

"ಉಹುಂ, ಯಾರು—?"

"ಆ....ಆ....ವಿದೇಶಿ...."

"ಯಾರು....ಆ ವಿದೇಶಿಯೇ?"

—ಇದ್ದಕ್ಕಿದ್ದ ಹಾಗೇ ಮಿಂಚು ಸೋಂಕಿದಂತೆ ಬೆಚ್ಚಿಬಿದ್ದು ಕೇಳಿದಳು ಮೆಹರ್‌ಬಾನುವಿನ ತಾಯಿ.

"ಹೂ....ಅವರೇ."

"ಆತ ಇದಕ್ಕೆ ಒಪ್ಪಿದಾನೆಯೇ ಮೆಹರ್?"

—ಚಿಂತೆ ತುಂಬಿದ ಧ್ವನಿಯಲ್ಲಿ ಕೇಳಿದಳು ಮೆಹರ್‌ಬಾನುವಿನ ತಾಯಿ.

"ಅವರು....ಒಪ್ಪುತ್ತಾರೆಯೋ ಬಿಡುತ್ತಾರೆಯೋ ನನಗೆ ತಿಳಿಯದು. ನಾನೆಂದೂ ಅವರನ್ನು ಕೇಳಿಲ್ಲ. ಅವರೂ ನನ್ನನ್ನು ಕೇಳಿಲ್ಲ ಆದರೆ ನಾನು ವಿವಾಹವಾದರೆ ಆಗುವುದು ಅವರನ್ನೇ."

—ದೃಢ ನಿರ್ಧಾರದ ಧ್ವನಿಯಲ್ಲಿ ಹೇಳಿದಳು.

"ನಿನ್ನ ಭಾಗ್ಯದಲ್ಲಿ ಏನು ಬರೆದಿದೆಯೋ ನಾನು ಕಾಣೆ ಮೆಹರ್, ಆದರೆ ನನಗೇನೋ ನಿನ್ನ ನಿರ್ಧಾರ ದುಡುಕುತನದ್ದೆಂದೇ ತೋರುತ್ತದೆ."

"ಏಕೆ?"

"ಆತ ಯಾರೋ, ಎಲ್ಲಿಯವನೋ, ಯಾವ ಜಾತಿ-ಮತದವನೋ? ಅಂಥ ಅಜ್ಞಾತ ಕುಲಗೋತ್ರನಿಗೆ, ಹಿಂದು ಮುಂದೆ ನೋಡದೆ ನಿನ್ನ ಹೃದಯವನ್ನು ಅರ್ಪಿಸುವುದು ಯುಕ್ತವೇ – ಯೋಚಿಸಿ ನೋಡು, ಮೆಹರ್. ನಮ್ಮ ಇಂದಿನ ಹರ್ಷ, ಬಳಿಕ ಶಾಶ್ವತ ಪರಿತಾಪಕ್ಕೆ ಕಾರಣವಾಗಬಾರದು........"

"ಪ್ರೇಮ ಭಗವಂತನ ಪ್ರತಿರೂಪವೆಂದು ನೀನೇ ಹೇಳಲಿಲ್ಲವೇ ಮಾ?"

"ನಿಜ."

"ಭಗವತ್ಸ್ವರೂಪಿಯಾದ ಪ್ರೇಮಕ್ಕೂ ಊರು, ಕೇರಿ, ಜಾತಿಮತಗಳ ಸಂಕೋಲೆಯುಂಟೇ?"

"ಪ್ರೇಮ ಭಗವಂತನ ಸ್ವರೂಪವೆಂದು ಅರ್ಥಮಾಡಿಕೊಂಡವರಿಗೆ, ಈ ಸಂಕೋಲೆಯ ಭಯವಿಲ್ಲದೆ ಇರಬಹುದು ಮೆಹರ್, ಆದರೆ ಎಲ್ಲಿಯವರೆಗೆ

ಜನ ಮತಧರ್ಮಗಳ ನಿಷ್ಠುರ ಅನುಷ್ಠಾನವೇ ಭಗವದಾರಾಧನಾ ಮಾರ್ಗ ಎಂದುಕೊಂಡಿರುವರೋ, ಎಲ್ಲಿಯವರೆಗೆ ನಮ್ಮ ವೈಯಕ್ತಿಕ ಬಾಳು, ಸುತ್ತಲ ಸಮಾಜ ಜೀವನದಿಂದ ಪರಿಮಿತವಾಗಿದೆಯೋ, ಅಲ್ಲಿಯವರೆಗೆ ನಾವೂ, ಈ ಸಂಕೋಲೆಗಳಿಗೆ ಬೆಲೆ ಕೊಡಲೇಬೇಕು, ಭಯಪಡಬೇಕು-"

"ಹಾಗೆ ಮಾಡಲು ನಾವು ಸಿದ್ಧರಾಗದಿದ್ದರೆ........"

"ಆಗ ಸಮಾಜದ ಟೀಕೆಯ, ತಿರಸ್ಕಾರದ ಅಗ್ನಿವೃಷ್ಟಿಯಲ್ಲಿ ಬೇಯಲು ಸಿದ್ಧರಾಗಬೇಕು. ಜನಮತದ ಸಂಕೋಲೆಯನ್ನು ಮುರಿಯುವಾಗ ಸುಲಭವೆಂದು ತೋರಿದರೂ, ಬಳಿಕ ಅದರ ಪರಿಣಾಮ ದುರ್ಭರವಾಗುತ್ತದೆ ಮೆಹರ್......."

"ಸಮಾಜದ ಸಂಕೋಲೆಯನ್ನು ಮುರಿದರೆ ಅದರ ತಿರಸ್ಕಾರದ ಬೆಂಕಿಯಲ್ಲಿ ಬೇಯಬೇಕು ; ಅದನ್ನು ಮನ್ನಿಸಿದರೆ, ಆತ್ಮಾವಹೇಳನದ ಬೆಂಕಿಯಲ್ಲಿ ದಹಿಸಬೇಕು... ...."

"ನಿಜ, ನಿಜ, ಮಗಳೇ, ಈ ಬದುಕು, ಹುಲಿಯ ಬಾಲವನ್ನು ಹಿಡಿದವರ ಹಾಗೆ ; ಎಷ್ಟು ಎಚ್ಚರವಾಗಿದ್ದರೂ ಸಾಲದು."

"ಆದರೂ, ಲೋಕದ ತಿರಸ್ಕಾರಕ್ಕಿಂತಲೂ, ಆತ್ಮದ ಶಾಶ್ವತ ಅವಹೇಳನವನ್ನು ಅನುಭವಿಸುವುದು ದುರ್ಭರವಲ್ಲವೇ ಮಾ ?"

—ಮುಗ್ಧತೆಯ ಧ್ವನಿಯಲ್ಲಿ ಹೇಳಿದಳು ಮೆಹರ್‌ಬಾನು.

ಅವಳ ಮಾತನ್ನು ಕೇಳಿ ಮೆಹರ್‌ಬಾನುವಿನ ತಾಯಿ, ದುಃಖ ತುಂಬಿದ ಧ್ವನಿಯಲ್ಲಿ ನಕ್ಕು ಹೇಳಿದಳು —

"ನಿನ್ನ ಮನಸ್ಸು ಯಾವ ಹಾದಿಯಲ್ಲಿ ಹರಿಯುತ್ತಿದೆ ಎಂಬುದನ್ನು ನಾನು ಬಲ್ಲೆ ಮೆಹರ್. ಪ್ರೇಮಪರವಶರಾದ ಸ್ತ್ರೀಯರೆಲ್ಲರೂ, ಇದೇ ಮಾತನ್ನೇ ಆಡುತ್ತಾರೆ. ನಾನೂ ನಿನ್ನ ತಾಯಿಯಾಗಿ ಹೇಳುವುದಾದರೆ, ನಿನ್ನ ಪ್ರೇಮಕ್ಕಿಂತಲೂ ಜಗತ್ತು ಹಿರಿದಲ್ಲ. ನಿನ್ನ ಪ್ರೇಮದ ಮಾರ್ಗದಲ್ಲಿ ಅಡ್ಡ ನಿಲ್ಲಲು ನನಗೆ ಇಷ್ಟವಿಲ್ಲ. ಆದರೆ ನಾನು ಹೇಳುವುದಿಷ್ಟೆ. ನೀನು ಆತನನ್ನು ಪ್ರೀತಿಸುವುದು ನಿಜ. ಆದರೆ ಆತ ನಿನ್ನನ್ನು ಪ್ರೀತಿಸುತ್ತಾನೋ ಇಲ್ಲವೋ ಎಂಬುದನ್ನು ನೀನು ಅರಿಯೆ. ಅದನ್ನು ಖಚಿತವಾಗಿ ಅರಿಯದ ಮುನ್ನ, ನಿನ್ನ ಪ್ರೇಮಾರ್ಪಣೆ ಮಾಡಲು ಧಾವಿಸಬೇಡ. ಈ ಜಗತ್ತನ್ನು ನಾನು ಬಲ್ಲೆ. ಕರೆಯದೆ, ತಾನಾಗಿಯೇ ಬರುವ ಹೆಣ್ಣನ್ನು ಗೌರವಿಸುವ

ಔದಾರ್ಯ ಈ ಜಗತ್ತಿನಲ್ಲಿ ಅಪರೂಪ. ನಾವು ಪ್ರೀತಿಸುವವರ ತಿರಸ್ಕಾರಕ್ಕೆ ಗುರಿಯಾಗುವುದಕ್ಕಿಂತ ಹೆಚ್ಚಿನ ಯಾತನೆ ಮತ್ತೊಂದಿಲ್ಲ."

—ಎಂದಳು ಮೆಹರ್‌ಬಾನುವಿನ ತಾಯಿ, ತನ್ನ ಮೋಹದ ಮಗಳ ನೆತ್ತಿಯನ್ನು ಮಮತೆಯಿಂದ ನೇವರಿಸುತ್ತಾ, ತನ್ನ ಮಾತನ್ನು ಮುಕ್ತಾಯ ಗೊಳಿಸಿ. ಆ ಮಾತಿಗೆ ಮೆಹರ್‌ಬಾನುವೂ ಏನೊಂದೂ ಉತ್ತರ ಕೊಡದೆ, ಕಿಟಕಿಯಾಚೆಯ ಕತ್ತಲನ್ನೇ ದಿಟ್ಟಿಸುತ್ತಾ ಮೌನವಾಗಿ ಕುಳಿತಿದ್ದಳು.

೫

ಅನಿರೀಕ್ಷಿತ ಪ್ರಣಯ ಭಾವನೆಯಿಂದ ಮೆಹರ್‌ಬಾನುವಿನ ಬಾಳು ಉದ್ವಿಗ್ನವಾಗಿರುವಾಗಲೇ ಅವಳ ಹೃದಯವನ್ನು ಮತ್ತಷ್ಟು ಉದ್ವಿಗ್ನಗೊಳಿಸುವ, ಅದರೊಂದಿಗೆ, ಶಾಂತವಾಗಿದ್ದ ಚಿತ್ರದುರ್ಗದ ರಾಜಕೀಯ ಜೀವನವನ್ನು ಕಲಕುವ ಸುದ್ದಿಯೊಂದು ಸೀರ್ಯದಿಂದ ಬಂದಿತು.

ಸೀರ್ಯದ ದಿವಾನ್-ಫೌಜುದಾರರ ಕಡೆಯಿಂದ ಬಂದ ಅವಸರದ ಆಳು ತಂದ ಪತ್ರವನ್ನು ಕಂಡು ಭರಮಪ್ಪನಾಯಕರಿಗೆ ಒಂದು ಗಳಿಗೆ ಮುಂದೇನು ಮಾಡುವುದೆಂದು ತೋಚದಂತಾಯಿತು.

ದಿವಾನ್-ಫೌಜುದಾರ್ ಖಾಸಿಂಖಾನ್, ತನ್ನ ಪತ್ರದಲ್ಲಿ ಚಿತ್ರದುರ್ಗದ ನಾಯಕರಿಗೆ ಹೀಗೆ ಬರೆದಿದ್ದ —

ನಮ್ಮ ವಕೀಲರಾದ ಜುಲ್‌ಫಿಕಾರ್‌ಖಾನ್‌ರು ತಮ್ಮ ದರಬಾರಿಗೆ ಬಂದಿದ್ದಾಗ, ತಾವು ಅವರನ್ನು ಸತ್ಕರಿಸಿದ ರೀತಿ ಮತ್ತು ಅವರೊಂದಿಗೆ ತಾವು ನಮಗೆ ಕಳಿಸಿದ ಉಡುಗೊರೆಗಳಿಗಾಗಿ ನಾವು ಆಭಾರಿಗಳಾಗಿದ್ದೇವೆ.

ಆ ಸಮಯದಲ್ಲಿ ತಾವು, ನಮ್ಮ ವಕೀಲರೊಂದಿಗೆ ಕಳುಹಿಸಿದ ಸ್ನೇಹ ಸಂದೇಶವೂ ನಮಗೆ ಬಹು ಹರ್ಷವಾಗಿದೆ.

ಅದಕ್ಕಿಂತಲೂ ಹೆಚ್ಚಾಗಿ, ತಮ್ಮಲ್ಲಿಗೆ ನಮ್ಮ ವೈಯಕ್ತಿಕ ಸ್ನೇಹ ಸಂದೇಶವನ್ನು ತಂದಿದ್ದ ಮೆಹರ್‌ಬಾನೂರವರ ಮೂಲಕ ತಾವು ನಮಗೆ

ಕಳಿಸಿರುವ ಸ್ನೇಹ—ಸಹಾಯದ ಆಶ್ವಾಸನೆಗೆ ನಾವು ತುಂಬಾ ಕೃತಜ್ಞ ರಾಗಿದ್ದೇವೆ.

ಈ ಪರಸ್ಪರ ಸ್ನೇಹ ಸೌಹಾರ್ದದ ಭಾವನೆಯಲ್ಲಿ, ತಾವು, ನಮ್ಮ ವಕೀಲರ ನಡೆನುಡಿಯಲ್ಲಿ ದರಬಾರಿನ ಮನಸ್ಸಿಗೆ ಕಿಂಚಿತ್ ಅಸಂತೋಷ ವನ್ನುಂಟುಮಾಡುವಂತಹುದೇನಾದರೂ ನಡೆದಿದ್ದಲ್ಲಿ, ಅದನ್ನು ತಾವು ಉದಾರ ಚಿತ್ತದಿಂದ ಮರೆತು ಬಿಡಬೇಕೆಂದು ಪ್ರಾರ್ಥಿಸುತ್ತೇವೆ.

ಪ್ರಕೃತ ಈ ಕಾಗದವನ್ನು ಬರೆದ ಅಭಿಪ್ರಾಯವೇನೆಂದರೆ:

ನಮ್ಮ ಪರಗಣೆಗೆ ಸೇರಿದ ಸೀಮೆಯಲ್ಲಿ ಮರಾಟಾ ಸರದಾರರು ಹಾವಳಿ ಮಾಡುತ್ತಿರುವ ವಿಷಯ ತಮಗೂ ತಿಳಿದುಬಂದಿರಬಹುದು. ನಮ್ಮ ಆಶ್ರಿತರಾದ ರಾಯದುರ್ಗದ ನಾಯಕರು, ಆ ಮರಾಟಾ ಸರದಾರ ರೊಂದಿಗೆ ಪಿತೂರಿ ಮಾಡಿ, ನಮ್ಮ ಅಧಿಕಾರವನ್ನು ಬುಡಮೇಲು ಮಾಡಲು ಒಳಸಂಚು ನಡೆಸುತ್ತಿರುವರೆಂದೂ, ಅವರ ಒತ್ತಾಸೆಯಿಂದ ಮರಾಟಾ ಸರದಾರ ಸಂತೋಜಿ ಘೋರ್ಪಡೆಯು, ನಮ್ಮ ಅಧಿಕಾರಕ್ಕೆ ಒಳಪಟ್ಟ ನಾಯಕನ ಹಟ್ಟಿ ಪ್ರಾಂತದ ಮೇಲೆ ದಾಳಿ ಮಾಡಲಿರುವರೆಂದೂ ನಮಗೆ ವಿಶ್ವಸನೀಯವಾಗಿ ತಿಳಿದುಬಂದಿದೆ. ಅವರ ಪುಂಡುತನವನ್ನು ಮಟ್ಟ ಹಾಕುವ ಸಲುವಾಗಿ, ನಾವು ನಮ್ಮ ಸೇನೆಗಳೊಂದಿಗೆ ತಳಕಿನ ಕೋಟೆ ಯಲ್ಲಿ ಬಿಡಾರ ಮಾಡುತ್ತೇವೆ.

ಈ ಲಡಾಯಿ ಸಂದರ್ಭದಲ್ಲಿ ನಮಗೆ ತಮ್ಮ ನೆರವು ಅತ್ಯಗತ್ಯವಾಗಿ ಬೇಕಾಗಿದೆ. ಇಂಥ ಸಮಯದಲ್ಲಿ ನಮ್ಮ ಆಪ್ತ ಮಿತ್ರರಾದ ತಾವು ನಮಗೆ, ತಮ್ಮ ಸೇನಾಬಲದೊಡನೆ "ಮದತ್" ಮಾಡುತ್ತೀರೆಂದು ನಂಬಿದೇವೆ.

ತಮಗೆ ನಮ್ಮ ಈ ಬೇಡಿಕೆ ಒಪ್ಪಿಗೆಯಾದಲ್ಲಿ ತಮ್ಮ ಪ್ರತ್ಯುತ್ತರ, ತಾವು ನಮಗೆ ನೀಡಬಹುದಾದ ಸೇನಾ ಸಹಾಯದ ವಿವರಗಳನ್ನು "ಬಿಲ್ ಕುಲ್ ಜರೂರ್" ಆಗಿ, ನಮ್ಮ ತಳಕಿನ ಬಿಡಾರಕ್ಕೆ ಕಳಿಸ ಬೇಕೆಂದೂ, ನಮ್ಮಿಂದ ಉತ್ತರ ಬಂದ ಕೂಡಲೇ, ಹೊರಟು ಬರಲು ಸೇನಾಸಿದ್ಧತೆ ಮಾಡಿಕೊಳ್ಳಬೇಕೆಂದೂ ಕೋರುತ್ತೇವೆ.

ತಮಗೂ ತಮ್ಮ "ಜನಾನಾ"ಕ್ಕೂ ತಮ್ಮ ಕುಮಾರರಿಗೂ ಖುದಾ ಶಾಶ್ವತ ಕಲ್ಯಾಣವನ್ನುಂಟುಮಾಡಲೆಂದೂ ಈ ರೀತಿ ಆರಂಭವಾದ

ಎರಡು ದರಬಾರುಗಳ ನಡುವಣ ಸ್ನೇಹ ವಿಶ್ವಾಸ ಶಾಶ್ವತವಾಗಿರಲೆಂದೂ, ಖುದಾನಲ್ಲಿ ಪ್ರಾರ್ಥಿಸುತ್ತೇವೆ.

ಇತಿ ಸಹಸ್ರ ಸಲಾಂಗಳು,

ಖಾಸಿಂಖಾನ್,

ದಿವಾನ್-ಫೌಜುದಾರ್, ಸಿರಾ.

ಆ ಪತ್ರವನ್ನು ಓದಿಸಿ ಕೇಳಿದ ನಾಯಕರಿಗೆ, ತಾವು ಮೆಹರ್‌ಬಾನುವಿಗೆ ಸೀಯರ್ಪದವರ ಬಗ್ಗೆ ನೀಡಿದ ಸ್ನೇಹದ ಆಶ್ವಾಸನೆ ನೆನಪಾಗಿ, ಈ ತುರ್ತು ಸಹಾಯದ ಯಾಚನೆಗೆ ಏನು ಹೇಳಬೇಕೆಂದು ತೋಚದೆ, ಆ ಬಗ್ಗೆ ತೀರ್ಮಾನ ಮಾಡಲು ಅವಸರದ ಮಂತ್ರಾಲೋಚನಾ ಸಭೆಯನ್ನು ಕರೆದರು.

ಸಭೆಯಲ್ಲಿ ಕರಣಿಕರು ದಿವಾನ್-ಫೌಜುದಾರರ ಪತ್ರವನ್ನೋದಿ, ಅದರ ಅಭಿಪ್ರಾಯವನ್ನು ವಿವರಿಸಿದ ಬಳಿಕ, ನಾಯಕರು,

"ಸಭೆ, ಈ ಪತ್ರದ ಬಗ್ಗೆ ಯಾವುದೇ ತೀರ್ಮಾನವನ್ನು ಕೈಗೊಳ್ಳುವ ಮೊದಲು, ನಾವು ಹೇಳಬೇಕಾದ ಮಾತೊಂದಿದೆ ಸೀಯರ್ಪದ ವಕೀಲರಿಗೆ ನಾವು ಅವರ ಉದ್ಧಟತನಕ್ಕೆ ತಕ್ಕ ಹಾಗೆ ಉತ್ತರ ಕೊಟ್ಟು ಕಳಿಸಿದುದು ಸರಿಯಷ್ಟೆ. ಆ ಬಳಿಕ, ಸೀಯರ್ಪದಿಂದ ಇಲ್ಲಿಗೆ ಆಗಮಿಸಿದ, ಗಾಯಕಿ ಮೆಹರ್‌ಬಾನೂರವರು, ನಮ್ಮಲ್ಲಿ, ಅಂತರಂಗವಾಗಿ 'ತಾವು ಸೀಯರ್ಪದವರ ಮಿತ್ರರಾಗಬೇಕು' ಎಂಬ ಯಾಚನೆಯನ್ನು ಮಾಡಿದರು. ಆ ಸಂದರ್ಭದಲ್ಲಿ ನಾವು ಅವರಿಗೆ 'ಸೀಯರ್ಪದವರು ಸರಿಸಮಾನತೆಯ ಮಟ್ಟದಲ್ಲಿ ನಮ್ಮ ಸ್ನೇಹಿತರಾಗುವ ಇಚ್ಛೆಯನ್ನು ವ್ಯಕ್ತಪಡಿಸಿದಲ್ಲಿ, ಚಿತ್ರದುರ್ಗ ಆ ಸ್ನೇಹವನ್ನು ಸ್ವೀಕರಿಸುವುದು' ಎಂದು ಮಾತುಕೊಟ್ಟಿದ್ದೆವು. ಈ ಮಾತು ತಮಗೆ ಈ ಸಂದರ್ಭದಲ್ಲಿ ತಿಳಿದಿರಬೇಕು ಎಂಬ ಉದ್ದಿಶ್ಯದಿಂದ ಹೇಳುತ್ತಿದ್ದೇವೆಯೇ ಹೊರತು, ತಮ್ಮ ಬಾಯನ್ನು ಕಟ್ಟಲೆಂದಲ್ಲ. ಈ ಪತ್ರದ ಬಗ್ಗೆ ಉಚಿತವಾದ ಯಾವುದೇ ತೀರ್ಮಾನವನ್ನು ಕೈಗೊಳ್ಳಲು ಈ ಸಭೆಗೆ ಸ್ವಾತಂತ್ರ್ಯವಿದೆ. ನಿಮ್ಮ ತೀರ್ಮಾನಕ್ಕೆ ನಾವೂ ಬದ್ಧರಾಗಿರುತ್ತೇವೆ."

—ಎಂದು ಹೇಳಿದರು.

ಸಭೆಯಲ್ಲಿ ನೆರೆದವರು, ಸೀಯರ್ಪದವರ ಪತ್ರ, ನಾಯಕರ ಮಾತುಗಳ ಬಗ್ಗೆ ಯೋಚನೆ ಮಾಡುತ್ತಿರುವಾಗ ದಳವಾಯಿ ಭರಮಣ್ಣ ಎದ್ದುನಿಂತು ನಾಯಕರಿಗೆ ಮುಜುರೆ ಮಾಡಿ ಹೇಳಿದ.

"ಪ್ರಭುಗಳು ಸೀರ್ಯದವರಿಗೆ ನೀಡಿದುದು ಕೇವಲಸ್ನೇಹದ ಆಶ್ವಾಸನವೇ ಹೊರತು, ಸಮರ ಸಹಾಯದ ವಚನವನ್ನಲ್ಲ ಎಂಬ ರೀತಿಯಲ್ಲಿ ನಾನು ಪ್ರಭುಗಳ ಮಾತಿನ ಅರ್ಥವನ್ನು ಗ್ರಹಿಸಿದ್ದೇನೆ. ವಸ್ತುಸ್ಥಿತಿಯೂ ಹಾಗೇ ಇದ್ದಲ್ಲಿ ನನ್ನದೊಂದು ಮನವಿ........"

" ಆಯಿತು. ನಿಮ್ಮ ರೀತಿಯಲ್ಲೇ ಯೋಚನೆಮಾಡಿ ಹೇಳಿ. ನಿಮ್ಮ ಅಭಿಪ್ರಾಯವೇನು ?"

—ನಾಯಕರು ಕೇಳಿದರು.

" ಈ ಪತ್ರದಲ್ಲಿ ಸೀರ್ಯದವರು ನಮ್ಮ ಬಗ್ಗೆ ವಿಶ್ವಾಸ ವ್ಯಕ್ತಪಡಿಸಿ, ಸ್ನೇಹ ಯಾಚನೆ ಮಾಡಿದರೂ, ಅವರ ಈ ಸ್ನೇಹ ಭಾವನೆ ತಮ್ಮ ಆಪತ್ಸಮಯದಲ್ಲಿ ಮೂಡಿದ ಭಾವನೆಯೇ ಹೊರತು, ಅವರ ಅಂತರಂಗದಲ್ಲಿ ನಮ್ಮ ಬಗ್ಗೆ ಸ್ನೇಹಭಾವನೆಯಿಲ್ಲ. ಅಷ್ಟೇ ಅಲ್ಲ. ಅವರು ಎಂದಿದ್ದರೂ ದುರ್ಗಕ್ಕೆ ವೈರಿಗಳೇ ಹೊರತು ಮಿತ್ರರಲ್ಲ. ಇವೊತ್ತು ಅವರಿಗಿರುವ ಗಂಡಾಂತರ ನೀಗಿದರೆ, ಪುನಃ ಅವರು ಮತ್ತೆ ತಮ್ಮ ದ್ವೇಷಭಾವನೆಯನ್ನೇ ಮುಂದುವರಿಸುತ್ತಾರೆಂದೇ ನನಗೆ ತೋರುತ್ತದೆ. ಹೀಗಿರುವಾಗ ನನಗೆ ತೋಚುವುದಿಷ್ಟು—"

" ಏನು ?"

" ಮರಾಟರಿಗೂ ಸೀರ್ಯದವರಿಗೂ ಯುದ್ಧ ಒದಗಿರುವ ಈ ಸಂದರ್ಭದಲ್ಲಿ, ನಾವು ಸೀರ್ಯದವರಿಗೆ ಸಹಾಯ ಮಾಡುವುದಕ್ಕಿಂತಲೂ ತಟಸ್ಥರಾಗಿಯೇ ಉಳಿದಲ್ಲಿ, ಅದರಿಂದ ನಮಗೆ ಹೆಚ್ಚಿನ ಲಾಭವಿದೆ."

" ಹೇಗೆ ?"

" ಒಂದುವೇಳೆ ಈಗಿನ ಲಡಾಯಿಯಲ್ಲಿ ಸೀರ್ಯದವರಿಗೆ ಸೋಲಾದರೆ, ನಮ್ಮ ಮಟ್ಟಿಗಂತೂ ಅವರ ಪೀಡೆಯೇ ಬಗೆಹರಿದುಹೋಯಿತು. ಹಾಗಲ್ಲದೆ ಒಂದು ವೇಳೆ ಸೀರ್ಯದವರಿಗೇ ಗೆಲುವಾದರೂ, ಈ ಯುದ್ಧದಿಂದ ದುರ್ಬಲರಾದ ಅವರು, ದುರ್ಗದವರೊಂದಿಗೆ, ಕೂಡಲೇ ಯುದ್ಧ ಮಾಡಲು ಯೋಚನೆ ಮಾಡುವುದಿಲ್ಲ. ಆದುದರಿಂದ ನಮ್ಮ ಶತ್ರು, ನಮ್ಮ ಪ್ರಯತ್ನವೇನೂ ಇಲ್ಲದೆ, ದುರ್ಬಲನಾಗುವಂಥ ಸಮಯ ಪ್ರಾಪ್ತವಾಗಿರುವಾಗ ನಾವು, ಯಾವುದೇ ಕಾರಣಕ್ಕಾಗಿಯಾದರೂ. ಆ ಶತ್ರುವಿಗೆ ಸಹಾಯ ಮಾಡಬಾರದೆಂಬುದೇ ನನ್ನ ಅಭಿಮತ."

— ದಳವಾಯಿ ಭರಮಣ್ಣ ಸ್ಪಷ್ಟವಾಗಿ ತನ್ನ ಅಭಿಪ್ರಾಯ ವ್ಯಕ್ತ ಪಡಿಸಿದ.

ಆತ ಹೇಳಿದುದೆಲ್ಲವನ್ನೂ ಸಮಾಧಾನವಾಗಿ ಕೇಳಿದ ಬಳಿಕ ನಾಯಕರು ಹೇಳಿದರು —

" ಸಭೆಯಲ್ಲಿ ನೆರೆದ ಇತರರಿಗೂ ಇದೇ ಅಭಿಪ್ರಾಯವಿದ್ದಲ್ಲಿ — ಹೇಳ ಬೇಕು ? "

" ದಳವಾಯಿಗಳು ಹೇಳಿದುದನ್ನು ಕೇಳಿ ನನಗೆ ಮತ್ತೊಂದು ಯೋಚನೆ ತೋಚುತ್ತಿದೆ ಪ್ರಭು !

—ಕುಡುತನಿ ವೆಂಕಣ್ಣ ಹೇಳಿದ.

" ಹೇಳಿ — ನಿಮ್ಮದೇನು ಅಭಿಪ್ರಾಯ ? "

" ನಮಗೆ ತಿಳಿದು ಬಂದಿರುವ ಗೂಢಚಾರರ ವಾರ್ತೆಯಂತೆ, ಸೀರ್ಯ ದವರ ಮೇಲೆ ನುಗ್ಗಿರುವ ಮರಾಟರ ಸೇನೆ ಸಣ್ಣ ಪುಟ್ಟದಲ್ಲ. ಅವರ ಬಳಿ ಸುಮಾರು ಇಪ್ಪತ್ತುಸಾವಿರ ಅಶ್ವಬಲವಿದೆ ಎಂದು ತಿಳಿದುಬಂದಿದೆ."

" ನಿಜ "

" ಆದುದರಿಂದ ಈ ಅಗಾಧ ಸೇನೆಯನ್ನು ಎದುರಿಸಬೇಕಾದರೆ, ಸೀರ್ಯ ದವರ ಬಹುಭಾಗದ ಸೇನೆಯೇ ನಾಯಕನ ಹಟ್ಟಿಯ ಕಡೆ ಹೊರಡ ಬೇಕಾಗುತ್ತದೆ. "

" ಅಹುದು "

" ಹೀಗೆ ಸೀರ್ಯದವರ ಗಮನವೆಲ್ಲವೂ ಮರಾಟರನ್ನು ಎದುರಿಸುವ ಕಡೆ ಇರುವಾಗ, ಸ್ವಯಂ ದಿವಾನ್-ಫೌಜುದಾರನೇ ಆ ಸೇನೆಯ ನಾಯಕ ನಾಗಿ ಹೊರಟಿರುವಾಗ, ಪ್ರಭುಗಳು ಮನಸ್ಸು ಮಾಡಿದಲ್ಲಿ, ನಾವು ಇತ್ತ ಕಡೆ ಸೀರ್ಯದ ಮೇಲೆ ದಾಳಿ ಮಾಡಿ, ಸೀರ್ಯವನ್ನೇ ವಶಪಡಿಸಿಕೊಂಡಲ್ಲಿ, ಆಗ, ನಮ್ಮ ಪ್ರಾಂತದಲ್ಲಿ ಮುಸಲ್ಮಾನರ ಆಳ್ವಿಕೆಯೇ ಕುಸಿದು ಬೀಳುತ್ತದೆ. ಇಂದಲ್ಲ ನಾಳೆ — ಎಂದಿದ್ದರೂ ನಮ್ಮ ವೈರಿಗಳಾಗಬಲ್ಲ, ಈ ಹಿಂದೂದ್ವೇಷೀ ಮುಸ್ಲಿಮರನ್ನು ಮಟ್ಟಹಾಕಲು ಜಗದಂಬೆಯೇ ನಮಗೆ ಸುವರ್ಣ ಸಮಯ ವನ್ನು ಕರುಣಿಸಿದ್ದಾಳೆಂಬುದೇ ನನ್ನ ಅಲ್ಪ ಮತಿಗೆ ತೋಚುವ ಅಭಿಪ್ರಾಯ. ಮುಂದಿನದು ಪ್ರಭುಚಿತ್ತ. ನನಗೆ ತಿಳಿದುದನ್ನು ಅರಿಕೆ ಮಾಡಿಕೊಂಡಿದ್ದೇನೆ. "

— ಎಂದು ಹೇಳಿದ ಕುಡುತನಿಯ ವೆಂಕಣ್ಣ.

ಕುಡುತನಿಯ ವೆಂಕಣ್ಣ ವ್ಯಕ್ತಪಡಿಸಿದ ಅಭಿಪ್ರಾಯ, ಸಭೆಯಲ್ಲಿ ನೆರೆದ ಬಹುಜನರಿಗೆ ಒಪ್ಪಿಗೆಯಾದಂತೆ ತೋರಿತು. ದಳವಾಯಿ ಭರಮಪ್ಪನಂತೂ. ಸ್ಪಷ್ಟವಾಗಿಯೇ —

"ದಳವಾಯಿ ವೆಂಕಣ್ಣನವರ ಆಲೋಚನೆ ಬಹಳ ಒಳ್ಳೆಯದು. ಪ್ರಭುಗಳು ಈ ಸಲಹೆಯನ್ನು ಬಹು ತೀವ್ರವಾಗಿ ಆಲೋಚಿಸಬೇಕು"

— ಎಂದು ಹೇಳಿ ತನ್ನ ಅನುಮೋದನೆಯನ್ನು ವ್ಯಕ್ತಪಡಿಸಿದ.

ಉಳಿದವರು, ನಾಯಕರು ಆ ಆಲೋಚನೆಗೆ ಏನು ಹೇಳುವರೋ ಎಂದು ನಾಯಕರತ್ತ ಉತ್ಸುಕರಾಗಿ ನೋಡಿದರು.

ನಾಯಕರು, ದಳವಾಯಿ ಭರಮಣ್ಣ, ಕುಡುತನಿಯ ವೆಂಕಣ್ಣ ಇವರುಗಳು ಹೇಳಿದ ಮಾತುಗಳನ್ನು ಮೆಲುಕು ಹಾಕುವಂತೆ, ಒಂದು ಕ್ಷಣಕಾಲ ಸುಮ್ಮನಿದ್ದು ಬಳಿಕ ಸಭೆ, ಅವರುಗಳ ಮಾತಿಗೆ ತಾವು ಏನಾದರೂ ಉತ್ತರ ಹೇಳಬೇಕೆಂದು ನಿರೀಕ್ಷಿಸುತ್ತಿರುವುದನ್ನು ಕಂಡು ಹೇಳಿದರು —

"ಸಭೆ, ದಳವಾಯಿ ಭರಮಣ್ಣನವರು, ಕುಡುತನಿಯ ವೆಂಕಣ್ಣನವರು ಆಡಿದ ಮಾತುಗಳನ್ನು ಸ್ವೀಕರಿಸಿದ ರೀತಿಯನ್ನು ನೋಡಿದರೆ. ಅವರ ಮಾತುಗಳ ಬಗ್ಗೆ, ಸಭೆ, ನನ್ನ ಅಭಿಪ್ರಾಯಕ್ಕಿಂತಲೂ ಹೆಚ್ಚಾಗಿ ಅಂಗೀಕಾರವನ್ನೇ ನಿರೀಕ್ಷಿಸುತ್ತಿರುವಂತೆ ತೋರುತ್ತದೆ. ಅಲ್ಲವೇ — "

— ಎಂದು ಹೇಳಿ ಒಂದು ಗಳಿಗೆ ಸುಮ್ಮನಿದ್ದು ಸಭೆಯೆಲ್ಲವನ್ನೂ ದಿಟ್ಟಿಸಿ ನೋಡಿ, ಬಳಿಕ ತಮ್ಮ ಮಾತನ್ನು ಮುಂದುವರಿಸಿ ಹೇಳಿದರು —

"ಅವರು ಹೇಳಿರುವ ಮಾತುಗಳಲ್ಲಿ ಸತ್ಯವಿದೆ. ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲಿ ರಾಜಕಾರಣದ ಸೂಕ್ಷ್ಮತಂತ್ರವನ್ನರಿತ ವ್ಯವಹಾರ ಕುಶಲತೆ ಇದೆ. ಅವರು ಹೇಳಿದಂತೆ ಮಾಡುವುದರಿಂದ, ಅವರು ಪ್ರಕಟಿಸಿದ ಉದ್ದೇಶವೂ ಸಫಲವಾಗಬಹುದು. ಆ ಬಗ್ಗೆ ನಮಗೂ ಹೆಚ್ಚು ಸಂಶಯವಿಲ್ಲ.

"ಆದರೆ ಅವರ ಅಭಿಪ್ರಾಯವನ್ನು ಅಂಗೀಕರಿಸಲು ನಮಗೆ ದೊಡ್ಡದಾದ ಬಾಧಕವೊಂದು ತೋರುತ್ತದೆ.

"ಇವರು ಚಿತ್ರದುರ್ಗದ ರಾಜ್ಯದ ಹಿತವನ್ನು ಸಾಧಿಸಬೇಕೆಂಬ ಸದಾಶಯ ಪೂರ್ಣವಾದ ಉತ್ಸಾಹದಲ್ಲಿ ಒಂದು ಮಾತು ಮರೆತಿದ್ದಾರೆ; ನಾವು ಸೀರ್ಯದವರಿಗೆ ಕಳಿಸಿರುವ ಸ್ನೇಹ ಸಂದೇಶವನ್ನು, ಶತ್ರುವಿಗೆ ಕೊಟ್ಟ ಮಾತನ್ನು ಕಡ್ಡಾಯವಾಗಿ ಉಳಿಸಿಕೊಳ್ಳಲೇಬೇಕೆಂಬ ಮಾತನ್ನು ವ್ಯವಹಾರ

ಶೀಲವಾದ ರಾಜಕಾರಣ ಒಪ್ಪುವುದಿಲ್ಲವಾದರೂ, ಅತ್ಯಂತ ವಿಪತ್ಸಮಯದಲ್ಲೂ ವಚನ ಭಂಗ ಮಾಡುವುದನ್ನು ಧರ್ಮ ಒಪ್ಪುವುದಿಲ್ಲ.

"ಕೇವಲ ಧರ್ಮಜಡನಾದ ದೊರೆಯನ್ನು ರಾಜ್ಯಲಕ್ಷ್ಮಿ ತ್ಯಜಿಸುತ್ತಾಳೆ ಎಂಬ ಆರ್ಯೋಕ್ತಿಯೊಂದು ಇದೆಯಂತೆ. ಹಾಗೇ ಅಧರ್ಮದ ಬುನಾದಿಯ ಮೇಲೆ ಸ್ಥಾಪಿತವಾದ ರಾಜ್ಯಗಳೂ ಉಳಿಯುವುದಿಲ್ಲ, ಬಹು ಬೇಗ ಮಣ್ಣು ಪಾಲಾಗುತ್ತವೆ—ಎಂಬುದಕ್ಕೂ ಸಾಕಷ್ಟು ನಿದರ್ಶನಗಳಿವೆ. ಅಧರ್ಮಯುತ ರಾಜ್ಯಪಿಪಾಸೆ ಹೇಗೆ ಕೊನೆಗಾಣುವುದೆಂಬುದನ್ನು ನಮ್ಮ ರಾಜ್ಯದ ಚರಿತ್ರೆಯಲ್ಲೇ ಕೆಲವೇ ವರ್ಷಗಳ ಹಿಂದೆ ನಾವೇ ಕಣ್ಣಾರೆ ಕಂಡಿದ್ದೇವೆ.

"ಪೂಜ್ಯ ಮುತ್ತಿತಿಮ್ಮಣ್ಣನಾಯಕರಿಂದ ಸ್ಥಾಪಿತವಾದ ಈ ಪವಿತ್ರ ಸಿಂಹಾಸನ ಇಂದು ಉಳಿದು ಬೆಳಗಿರುವುದು ಶಕುನಿ ತಂತ್ರದಿಂದಲ್ಲ; ಶೌರ್ಯಯುತ ಧರ್ಮಾಚರಣೆಯಿಂದ; ಭಗವತೀ ಉತ್ಸವಾಂಬೇ, ಏಕನಾಥೇಶ್ವರಿಯರ ಕೃಪೆಯಿಂದ; ಸದ್ಗುರುಗಳ ಹರಕೆಯಿಂದ. ಇಂದು ಅದೆಲ್ಲವನ್ನು ಮರೆತು, ಅಧರ್ಮಾಚರಣೆಯಿಂದ ಈ ರಾಜ್ಯವನ್ನು ಕಾಪಾಡಿಕೊಳ್ಳುವಂಥ ದುಸ್ಸಮಯ ಪ್ರಾಪ್ತವಾಗಿಲ್ಲವೆಂದೇ ನಮ್ಮ ಅಭಿಪ್ರಾಯ. ಇತರರು ನಮ್ಮ ಬಗ್ಗೆ ಅಧರ್ಮಯುತವಾದುದನ್ನು ಆಚರಿಸುವುದನ್ನು ಕಂಡಾಗ, ನಾವು ಎಷ್ಟು ಹೇಸುತ್ತೇವೆಯೋ, ಅದಕ್ಕಿಂತಲೂ ಮಿಗಿಲಾಗಿ ಇತರರ ಬಗ್ಗೆ ಅಧರ್ಮವನ್ನು ಆಚರಿಸಲು ನಮ್ಮ ಮನಸ್ಸು ಹೇಸುತ್ತದೆ. ಜಗತ್ತೆಲ್ಲಾ ಹೀಯಾಳಿಸುವ ವಿಶ್ವಾಸಘಾತಕತನದ ಕಲಂಕ ಈ ರಾಜ್ಯಕ್ಕೆ ಈ ಪವಿತ್ರ ಸಿಂಹಾಸನಕ್ಕೆ ಸೋಕಲಾಗದು.

"ಈ ಕಾರಣಕ್ಕಾಗಿ, ಸರ್ವದಾ ಮಾನ್ಯರಾದ ದಳವಾಯಿ ಭರಮಣ್ಣನವನು, ಕುಡುತನಿ ವೆಂಕಣ್ಣನವರ ಅಭಿಪ್ರಾಯವನ್ನು ಮನ್ನಿಸಲು ನಮ್ಮ ಕೈ ಕಟ್ಟಿದೆ.

"ಆದುದರಿಂದ ದಳವಾಯಿಗಳ ಮಾತು ನಮಗೆ ಒಪ್ಪಿಗೆಯಿಲ್ಲವೆಂದರೆ, ಆ ಮಾತನ್ನು ಅವರು ಅನ್ಯಥಾಭಾವಿಸಬಾರದು. ಅದಲ್ಲದೆ ಬೇರೆ ಮಾರ್ಗವಿದ್ದರೆ ಸೂಚಿಸಬೇಕು."

ಹೀಗೆ ಹೇಳಿ, ನಾಯಕರು ತಮ್ಮ ಮಾತನ್ನು ಮುಗಿಸಿದ ಬಳಿಕ, ಅದುವರೆವಿಗೂ ಎಲ್ಲರ ಮಾತನ್ನೂ ಕೇಳುತ್ತಾ ಕುಳಿತಿದ್ದ ಪ್ರಧಾನಿ ಪರಶು

ರಾಮಪ್ಪನವರು ಎದ್ದು ನಿಂತು, ನಾಯಕರಿಗೆ, ಸಭೆಗೆ ಹೇಳಿದರು.

"ದಳವಾಯಿ ಭರಮಣ್ಣನವರು, ಕುಡುತನಿ ವೆಂಕಣ್ಣನವರು ಹೇಳಿದ, ಸೀರ್ಯದವರು ಎಂದಿದ್ದರೂ ನಮ್ಮ ಶತ್ರುಗಳು ಎಂಬ ಮಾತು ನನಗೂ ಒಪ್ಪಿಗೆಯಿದೆ. ಸೀರ್ಯದವರ ಬಗ್ಗೆ ನನ್ನದೂ ಅದೇ ಅಭಿಪ್ರಾಯವೇ. ಇವರು ಆಪತ್ಸಮಯದಲ್ಲಿ ಸಹಾಯ ಯಾಚಿಸಿದರೂ, ಬಳಿಕ ನಮ್ಮ ಬೆನ್ನಲ್ಲಿ ಹೊಕ್ಕು ಇರಿಯುತ್ತಾರೆ ಎಂಬುದು ನಿಜವೇ.

"ಅಷ್ಟೇ ಮಟ್ಟಿಗೆ ಪ್ರಭುಗಳು ಹೇಳಿದ ಮಾತೂ ಸತ್ಯ.

"ಆದರೆ ಇಂದಿನ ಸಮಯದಲ್ಲಿ, ಧರ್ಮದ ಮಾತನ್ನು ಬದಿಗಿರಿಸಿದರೂ ಸೀರ್ಯದವರಿಗೆ ಸಹಾಯ ಮಾಡುವುದು ಅಗತ್ಯವೆಂದು ತೋರುತ್ತದೆ."

"ಏಕೆ ?"

— ನಾಯಕರೇ ಪ್ರಶ್ನೆ ಮಾಡಿದರು.

"ಇಂದು ಮರಾಟರ ಬೆನ್ನುಕಟ್ಟಿರುವವರು ರಾಯದುರ್ಗದವರು, ಹರಪನಹಳ್ಳಿಯವರು ಎಂಬ ಮಾತನ್ನು ಮಾತ್ರ ನಾವು, ಸೀರ್ಯದವರ ಮೇಲೆ ನಮಗಿರುವ ಆಕ್ರೋಶದಲ್ಲಿ ಮರೆಯಬಾರದು. ನಾಯಕನ ಹಟ್ಟಿಯ ಗಡಿಯನ್ನು ದಾಟಿ ಮುಂದುವರಿದ ಮರಾಟರು, ಆ ಸೀಮೆಯಲ್ಲಿ ಸೀರ್ಯದವರನ್ನು ಗೆದ್ದು ಮುಂದುವರಿದರೆ, ಅವರ ದೃಷ್ಟಿ ಹಿರಿಯೂರು. ಸೀರ್ಯದತ್ತ ಹೊರಳುವುದೋ ಅಥವಾ ಅದಕ್ಕಿಂತಲೂ ಸಮೀಪವಾದ ಚಿತ್ರದುರ್ಗದ ಕಡೆಯೇ ತಿರುಗಬಹುದೋ ಹೇಳಬಲ್ಲವರು ಯಾರು ? ಚಳ್ಳಕೆರೆಯಿಂದ ಚಿತ್ರದುರ್ಗಕ್ಕೆ ಕೇವಲ ಎರಡುಗಾವುದ ದೂರ; ಹರಪನ ಹಳ್ಳಿ, ರಾಯದುರ್ಗದ ನಾಯಕರು ನಮ್ಮ ಸೀಮೆಯ ಆಜನ್ಮ ವೈರಿಗಳು. ಹೀಗಿರುವಾಗ, ಸೀರ್ಯದವರಿಗೆ ಬೆಂಬಲ ಕೊಡುವ ಯೋಜನೆಗಿಂತಲೂ ಹೆಚ್ಚಾಗಿ ನಮ್ಮ ರಕ್ಷಣೆಗಾಗಿ, ಅತ್ತ ಕಡೆ ನಮ್ಮ ಸೈನ್ಯವನ್ನು ಕಳಿಸುವುದು ಒಳ್ಳೆಯದು. ಒಂದು ವೇಳೆ ಈ ಬಾರಿಯ ಯುದ್ಧದಲ್ಲಿ ಸೀರ್ಯದವರಿಗೇ ಜಯವಾದರೆ, ಅವರಿಗೆ ರಕ್ಷಣೆ ನೀಡಿದ ನೆಪದ ಮೇಲೆ ಅವರ ವಶದಲ್ಲಿರುವ ಒಂದೆರಡು ಕೋಟೆಗಳನ್ನಾದರೂ ಕೇಳಬಹುದು. ಸೀರ್ಯದವರು ಸೋತರೆ ಆಗ ನಾವು ಅಲ್ಲಿಂದಲೇ ದುರ್ಗದ ರಕ್ಷಣೆ ಮಾಡಿಕೊಳ್ಳಲು ಅವಕಾಶ ಸಿಗುತ್ತದೆ. ಆದುದರಿಂದ ಈ ಸಂದರ್ಭದಲ್ಲಿ ಪ್ರಭುಗಳು ಸೀರ್ಯದವರ ಬೇಡಿಕೆಯನ್ನು ನಿರಾಕರಿಸಬಾರದೆಂಬುದೇ ನನ್ನ ನಮ್ರ ಸಲಹೆ."

—ಎಂದು ಹೇಳಿದರು ಪರಶುರಾಮಪ್ಪನವರು.

ಅವರು ಹೇಳಿದ ಮಾತನ್ನು ಕೇಳಿ, ದಳವಾಯಿ ಭರಮಣ್ಣ, ಕುಡುತನಿ ವೆಂಕಣ್ಣ ಮೊದಲಾದವರಿಗೆ, ಪರಶುರಾಮಪ್ಪನವರು, ತಮ್ಮ ಮಾತಿಗೆ ವಿರುದ್ಧ ವಾದ ಸಲಹೆಯನ್ನು ಹೇಳಿದರೆಂದು ಕ್ಷಣಕಾಲ ಅಸಮಾಧಾನವಾದರೂ, ಅವರು ಹೇಳಿದ ಮಾತುಗಳನ್ನು ಆಲೋಚಿಸಿದ ಬಳಿಕ, ಅವರ ಮಾತಿನಲ್ಲಿ ಹೆಚ್ಚು ಸತ್ಯವಿರುವಂತೆ ತೋರಿತು.

ನಾಯಕರಿಗೂ ಹಾಗೇ ಅನಿಸಿ—

"ಪ್ರಧಾನಿಗಳ ಸಲಹೆಯ ಬಗ್ಗೆ ನಿಮ್ಮದೇನು ಯೋಚನೆ?"

—ಎಂದು ಉಳಿದವರನ್ನು ಕೇಳಿದರು.

"ಪ್ರಧಾನಿಗಳ ಸಲಹೆ ಪ್ರಭುಗಳಿಗೆ ಸಮ್ಮತವಾದಲ್ಲಿ ನಮಗೂ ಒಪ್ಪಿಗೆಯೇ."

—ಉಳಿದವರ ಪರವಾಗಿ ದಳವಾಯಿ ಭರಮಣ್ಣ ಹೇಳಿದ.

"ಅವರ ಸಲಹೆ ನಿಮಗೆಲ್ಲರಿಗೂ ಒಪ್ಪಿಗೆಯಾದಲ್ಲಿ, ಧರ್ಮ ಸಮ್ಮತವೂ ರಾಜಕಾರಣಪಟುತ್ವವೂ ಕೂಡಿರುವ ಅವರ ಸಲಹೆ ನಮಗೂ ಸಹ ಅಂಗೀಕಾರಾರ್ಹವಾಗಿದೆ. ಹಾಗಿದ್ದಲ್ಲಿ ಮುಂದಿನ ಯೋಚನೆ ಮಾಡಬಹುದು."

—ನಾಯಕರು ಹೇಳಿದರು.

"ಈ ಸಂದರ್ಭದಲ್ಲಿ ನಾನು ಹೇಳುವಂಥ ಮಾತೊಂದಿದೆ. ಅಪ್ಪಣೆಯಾಗಬೇಕು."

—ಈ ಮಾತುಗಳಲ್ಲಿ ಅದುವರೆಗೆ ಒಂದೂ ಮಾತನಾಡದಿದ್ದ ಹೊಳಲಕೆರೆಯ ಬೊಮ್ಮಣ್ಣ ಹೇಳಿದ.

"ಪ್ರಧಾನಿಗಳಲ್ಲಿ ವಸಿಷ್ಠರ ಧರ್ಮಗುಣವಿದೆ, ಚಾಣಕ್ಯನ ಕುಶಲತೆಯಿದೆ. ಅಂಥವರು ಸಲಹೆ ಮಾಡಿದ ಬಳಿಕ 'ಹಾಗಾಗಬಹುದು, ಹೀಗೆ ಮಾಡಬಹುದು, ಎಂದು ಹೇಳುವಂಥ ಶಕ್ತಿ ನನಗಿಲ್ಲ. ಈಗ, ಹೇಗೂ ಸೀಯರ್‌ದವರಿಗೆ ನಾವು ಸಹಾಯ ಮಾಡಬೇಕು ಎಂದು ಎಲ್ಲರೂ ಒಪ್ಪಿಕೊಂಡ ಹಾಗೇ ಆಗಿದೆ........"

"ನಿಜ."

"ಆದರೆ ಅವರಿಗೆ ಸಹಾಯ ಮಾಡುವಾಗ, ನಾವು ಒಂದು ಕೆಲಸ ಮಾಡಬಹುದು........"

" ಏನು ಹೇಳಿ ! "

" ನಮಗೆ ಮರಾಟರು ಮಿತ್ರರಲ್ಲ. ಸೀರ್ಯದವರೂ ಮಿತ್ರರಲ್ಲ. ಹೇಳಿ ಕೇಳಿ ಇಬ್ಬರೂ ನಮಗೆ ಶತ್ರುಗಳೇ. ಈ ಇಬ್ಬರಲ್ಲಿ ಯಾರು ಗೆದ್ದರೂ, ಸೋತರೂ ನಮಗೆ ಬರುವ ಭಾಗ್ಯ ಅಷ್ಟರಲ್ಲೇ ಇದೆ. ಯಾರು ಗೆದ್ದರೂ, ಗೆದ್ದವರು ನಮ್ಮಕಡೆ ಕೆಂಗಣ್ಣು ತಿರುಗಿಸಬಹುದು............... "

" ಅದೂ ನಿಜವೇ "

— ಪರಶುರಾಮಪ್ಪನವರು ಹೇಳಿದರು.

" ಮುಂದೆ ಹೇಗಾಗುವುದೋ ಅದು ಭವಿಷ್ಯಗರ್ಭದಲ್ಲಿರುವ ಮಾತು. ಆದರೆ ಸದ್ಯಕ್ಕಂತೂ ನಾವು ಸೀರ್ಯದವರಿಗೆ ಸಹಾಯ ಮಾಡಬೇಕಾದ ಸ್ಥಿತಿ ಬಂದಿದೆ. ಹಾಗಿರುವಾಗ ನಾವು ಒಂದು ಕೆಲಸ ಮಾಡಬಹುದು............ "

" ಹೇಳಿ............ "

" ಸೀರ್ಯದ ದಿವಾನ್-ಫೌಜುದಾರರು ನಾವು ನಮ್ಮ ಸೇನೆಯನ್ನು ಅವರ ಸಹಾಯಕ್ಕಾಗಿ ತಳಕಿನ ಕೋಟೆಗೇ ಕಳಿಸಬೇಕೆಂದು ಕೇಳಿದ್ದಾರೆ. ಆದರೆ ನಾವು ಹಾಗೆ ಮಾಡುವುದು ಬೇಡ. ಗಡಿಯ ಬಳಿ ಮರಾಟರಿಗೂ, ಸೀರ್ಯದವರಿಗೂ ಘನ ಲಡಾಯಿ ಆಗುವುದು ಖಂಡಿತ. ಒಂದು ವೇಳೆ ಅಲ್ಲಿ ಸೀರ್ಯದವರಿಗೆ ಸೋಲಾಗಿ ಹಿಂದೆ ಸರಿದರೆ, ಆಗ ನಾವು ಅವರ ಪರವಾಗಿ ಮರಾಟರ ಮೇಲೆ ನುಗ್ಗುವುದು. ಹಾಗೆ ಎರಡು ದಿನ, ಅವರಿಬ್ಬರಿಗೇ ಯುದ್ಧವಾಗಲು ಬಿಟ್ಟಲ್ಲಿ ಯಾರೇ ಗೆದ್ದರೂ, ಇಬ್ಬರೂ ದುರ್ಬಲರಾಗುವುದು ಖಂಡಿತ. ಆ ಹೊತ್ತಿನಲ್ಲಿ ನಾವು ನಮ್ಮ ಫೌಜನ್ನು ನುಗ್ಗಿಸಿದರೆ. ನಮ್ಮ ಸೇನೆಗೆ ಹೆಚ್ಚು ನಷ್ಟವಿಲ್ಲದೆ ಸೀರ್ಯದವರ ರಕ್ಷಣೆಯ ಕಾರ್ಯ ನೆರವೇರುತ್ತದೆ. ಸೀರ್ಯದವರಿಗೂ ನಮ್ಮಿಂದಲೇ ಉಳಿದೆವು ಎಂಬ ಮಾತು ಮನವರಿಕೆಯಾಗುತ್ತದೆ. ಪ್ರಭುಗಳಿಗೆ ಒಪ್ಪಿಗೆಯಿದ್ದಲ್ಲಿ ಹೀಗೆ ಮಾಡಬಹುದು.

— ಎಂದು ಸೂಚಿಸಿದ ಹೊಳಲಕೆರೆಯ ಬೊಮ್ಮಣ್ಣ.

ಯುಕ್ತಿಯುಕ್ತವಾದ ಬೊಮ್ಮಣ್ಣನ ಮಾತು ಎಲ್ಲರಿಗೂ ಒಪ್ಪಿಗೆಯಾಯಿತು. ಪ್ರಭುಗಳೂ ಆ ಸಲಹೆಯನ್ನೂ ಒಪ್ಪಿಕೊಂಡು, ಸೀರ್ಯದ ದಿವಾನ್-ಫೌಜುದಾರನಿಗೆ ತಮ್ಮ ಸಹಾಯದ ಆಶ್ವಾಸನೆಯ ರಾಯಸವನ್ನು ಬರೆಸುವಂತೆ ಪ್ರಧಾನಿಗಳಿಗೆ ಹೇಳಿದರು. ಆ ವಿಷಯ ಇತ್ಯರ್ಥವಾದ ಬಳಿಕ ಸೀರ್ಯದವರ ಬೆಂಬಲಕ್ಕೆ ಹೊರಡುವ ದುರ್ಗದ ಸೇನೆಯ ನಾಯಕತ್ವವನ್ನು

ಯಾರಿಗೆ ವಹಿಸುವುದು ಎಂಬ ವಿಷಯ ಚರ್ಚೆಗೆ ಬಂದಿತು

ಆ ಬಗ್ಗೆ ಹೆಚ್ಚು ಚರ್ಚೆ ನಡೆಯಲು ಅವಕಾಶ ಕೊಡದೆ, ನಾಯಕರೇ,

" ಈ ಸಮಯದಲ್ಲಿ ದುರ್ಗಕ್ಕೆ ದಾಳಿಯ ಭಯವಿರುವುದರಿಂದ ದಳವಾಯಿ ಭರಮಣ್ಣನವರು ಈ ಕೋಟೆಯ ರಕ್ಷಣೆಗಾಗಿ ನಿಲ್ಲಲಿ. ಕುಡುತನಿ ವೆಂಕಣ್ಣನವರು ಹೊಳಲಕೆರೆ ಬೊಮ್ಮಣ್ಣನವರು ನಾಯಕತ್ವವನ್ನು ವಹಿಸಿಕೊಂಡು, ನಮ್ಮ ಸೇನೆಯೊಂದಿಗೆ ಸೀರ್ಯದವರ ರಕ್ಷಣೆಗೆ ಹೊರಡಲಿ. ದಳವಾಯಿ ಭರಮಣ್ಣ, ಕುಡುತನಿ ವೆಂಕಣ್ಣ, ಹೊಳಲಕೆರೆ ಬೊಮ್ಮಣ್ಣ — ಈ ಮೂವರು ಕಲೆತು ಎಷ್ಟು ಸೇನೆ, ಎಷ್ಟು ಅಶ್ವಬಲ ಸೀರ್ಯದವರ ರಕ್ಷಣೆಗೆ ಹೋಗಬೇಕು ಎಂದು ನಿರ್ಧರಿಸಲಿ "

ಎಂದು ತೀರ್ಮಾನಿಸಿದರು

ಅರಮನೆಯ ಕರಣಿಕರಿಂದ ಸಭೆಯಲ್ಲಿ ನೆರೆದವರೆಲ್ಲರಿಗೂ ವೀಳಯದ ಹಂಚಿಕೆಯಾದ ಬಳಿಕ ಅಂದಿನ ಸಭೆ ಬರಖಾಸ್ತಾಯಿತು.

## ೬

ಚಿತ್ರದುರ್ಗದ ಸೇನೆ, ಸೀರ್ಯದ ರಕ್ಷಣೆಗಾಗಿ ಮರಾಟರ ವಿರುದ್ಧ ಹೋರಾಡಲು ಹೊರಡಬೇಕು ಎಂಬ ತೀರ್ಮಾನವಾದ ದಿನದಿಂದಲೇ ಸೇನಾ ಸಿದ್ಧತೆಯ ಕಾರ್ಯ ನಡೆಯಲಾರಂಭಿಸಿತು. ದುರ್ಗದಲ್ಲಿದ್ದ ಸೇನೆಯನ್ನು ಸಜ್ಜುಗೊಳಿಸುವ ಕಾರ್ಯ ನಡೆಯುತ್ತಿರುವಂತೆಯೇ, ಸುತ್ತಮುತ್ತಲಿನ ಸಾಮಂತ ನಾಯಕರು, ಗೌಡರುಗಳಿಗೆ, ತಮ್ಮಲ್ಲಿಯ ಸೇನಾಬಲವನ್ನು ಕೂಡಲೇ ದುರ್ಗಕ್ಕೆ ಕಳಿಸಬೇಕೆಂಬ ಅವಸರದ ಓಲೆಗಳು ಹೋಗಿ ಅದರಂತೆಯೇ ದಿನದಿನವೂ ಹತ್ತಾರು ಕಡೆಯಿಂದ ಸೇನೆಗಳು ಬಂದು ದುರ್ಗದಲ್ಲಿ ಕಲೆಯಲಾರಂಭಿಸಿ ನಗರಕ್ಕೆ ನಗರವೇ ಒಂದು ಮಹಾ ಸೇನಾಶಿಬಿರದಂತೆ ಕಾಣಿಸಲಾರಂಭಿಸಿತು.

ಪಟ್ಟಣದಲ್ಲೆಲ್ಲಾ ಹಬ್ಬಿದ ದುರ್ಗದ ಸೇನೆ ದಂಡಯಾತ್ರೆ ಹೊರಡುವ

ದೆಂಬ ವಾರ್ತೆ ಜಾರ್ಜ ಡ್ಯುವ್ರೋರೋನ ಕಿವಿಗೂ ಬಿದ್ದಿತು. ಆ ವಾರ್ತೆ ತಿಳಿಯುತ್ತಿದ್ದಂತೆಯೇ ಜಾರ್ಜ ನಾಯಕರ ಭೇಟಿಗೆ ಧಾವಿಸಿದ.

ಅರಮನೆಯ ದಿವಾನ್‌ಖಾನೆಯಲ್ಲಿ ಜಾರ್ಜಗೆ ಭೇಟಿಯನ್ನು ಕೊಟ್ಟ ನಾಯಕರು, ಆತನನ್ನು ಕುಶಲ ಪ್ರಶ್ನೆ ಮಾಡಿ, ಆತನ ಕೆಲಸ ಹೇಗೆ ನಡೆಯುತ್ತಿದೆ ಎಂಬುದನ್ನೂ ಅರಿತು ಮನಸ್ಸಿಗೆ ತೃಪ್ತಿ ಮಾಡಿಕೊಂಡರು.

ನಾಯಕರು ತನ್ನನ್ನು ಆ ಪ್ರಶ್ನೆಗಳನ್ನು ಮಾಡುತ್ತಿರುವಾಗ ಜಾರ್ಜನ ಹೃದಯ ಅಸಹನೆಯಿಂದ ಕುಪ್ಪಳಿಸುತ್ತಿತ್ತು. ಆ ಅಸಹನೆಯನ್ನು ತಡೆಗಟ್ಟಲಾಗದೆ, ದುಭಾಷಿಗಳಿಗೆ –

"ದಯವಿಟ್ಟು ನಾಯಕರಿಗೆ ಹೇಳಿ, ನಾನು ಈ ವಿಷಯ ಚರ್ಚೆ ಮಾಡಲಲ್ಲ ಇಲ್ಲಿಗೆ ಬಂದದ್ದು"

— ಎಂದು ಹೇಳಿದ.

ಜಾರ್ಜನ ಪರವಾಗಿ ದುಭಾಷಿ ಹೇಳಿದ ಮಾತನ್ನು ಕೇಳಿ, ನಾಯಕರು –

"ನಮ್ಮನ್ನು ಮನ್ನಿಸಬೇಕು. ನಮ್ಮ ಆಸಕ್ತಿಯಲ್ಲಿ ನೀವು ಬಂದ ವಿಷಯವನ್ನು ವಿಚಾರಿಸುವುದನ್ನೇ ಮರೆತುಬಿಟ್ಟೆದ್ದೆವು. ಈಗ ಹೇಳಿ ನಮ್ಮಿಂದೆ ನಿಮಗೇನಾಗಬೇಕು ? ಈಗ ಬಂದ್ದಿದೇನು ?

ಎಂದು ಕೇಳಿದರು.

"ನಾನು ಇಲ್ಲಿಂದ ಹೊರಡಲು ತಮ್ಮ ಅಪ್ಪಣೆಯನ್ನು ಪಡೆಯಲು ಬಂದಿದ್ದೇನೆ. ಅಪ್ಪಣೆಕೊಡಬೇಕು."

ಜಾರ್ಜನ ಬೇಡಿಕೆಯನ್ನು ಕೇಳಿ ನಾಯಕರಿಗೆ ಆಶ್ಚರ್ಯವಾಯಿತು.

ಇದೇನಿದು ? ಇದಕ್ಕಿದ್ದ ಹಾಗೇ ಇಂಥ ವಿಚಿತ್ರ ಬೇಡಿಕೆ ! ಇಷ್ಟು ಬೇಗ ನಿಮಗೆ ದುರ್ಗ ಬೇಸರ ಬಂದಿತೆ ? ಅಥವಾ ನಿಮ್ಮನ್ನು ಬೇಸರಗೊಳಿಸುವಂಥ ಕೆಲಸಗಳೇನಾದರೂ ನಮ್ಮವರಿಂದ ಆಯಿತೇ ?

"ಅಂಥದೇನೂ ಆಗಿಲ್ಲ."

"ಹಾಗಿದ್ದರೆ ಇದ್ದಕ್ಕಿದ್ದ ಹಾಗೇ ಇಲ್ಲಿಂದ ಹೊರಡುವ ಮಾತೇಕೆ ?"

"ಈ ಕೋಟೆಯನ್ನು ಬಲಪಡಿಸುವ ಕೆಲಸವನ್ನು ಒಪ್ಪಿಕೊಳ್ಳುವ ಪೂರ್ವದಲ್ಲೇ ಪ್ರಭುಗಳಲ್ಲಿ ನಾನೊಂದು ವಿನಂತಿ ಮಾಡಿಕೊಂಡಿದ್ದೆ. ಅದು ಪ್ರಭುಗಳಿಗೆ ಮರೆತು ಹೋಯಿತೋ ಏನೋ ?"

“ ಹಾಗಿದ್ದರೂ ಇರಬಹುದು. ಈಗ ಮತ್ತೊಮ್ಮೆ ನೆನಪಿಸಲು ಅಭ್ಯಂತರವೇನೂ ಇಲ್ಲವಷ್ಟೆ.... ”

“ ಖಂಡಿತವಾಗಿಯೂ ಇಲ್ಲ. ಆ ದಿನವೇ ನಾನು ತಮ್ಮಲ್ಲಿ ಬಿನ್ನವಿಸಿಕೊಂಡಿದ್ದೆ ; ನನ್ನ ಬಾಳಿನಲ್ಲಿ ನನಗಿರುವ ಬಯಕೆಯೆಲ್ಲಾ, ಸಂತೋಜಿ ಘೋರ್ಪಡೆಯ ವಧೆ ಮಾಡಬೇಕೆಂಬುದು – ಎಂದು. ಈಗ ಸಂತೋಜಿಯ ಸೇನೆಗಳು ಪುನಃ ನಿಮ್ಮ ಸೀಮೆಯ ಸಮೀಪಕ್ಕೆ ಬಂದಿವೆಯೆಂದೂ, ಅವನನ್ನು ಪ್ರತಿಭಟಿಸಲು ತಾವು ಸೇನಾಸಿದ್ಧತೆ ಮಾಡಿಕೊಳ್ಳುತ್ತಿರುವುದಾಗಿಯೂ ನನಗೆ ತಿಳಿಯಿತು. ಆದ್ದರಿಂದಲೇ ನಿಮ್ಮನ್ನು ಕಾಣಲು ಧಾವಿಸಿದೆ. ನಿಮ್ಮ ಸೇನೆಯೊಂದಿಗೆ ಹೊರಡಲು ನನಗೂ ಅಪ್ಪಣೆ ಕೊಡಬೇಕು.”

— ಜಾರ್ಜ್ ಕಳಕಳಿಯಿಂದ ಬೇಡಿದ.

“ ಓ, ಆ ವಿಷಯವೇ. ಅದು ನಮಗೂ ನೆನಪಿತ್ತು. ಈಗ ನಾವೇ ಸಂತೋಜಿ ಘೋರ್ಪಡೆಯ ವಿರುದ್ಧ ಯುದ್ಧ ಮಾಡುವ ಪ್ರಸಂಗ ಪ್ರಾಪ್ತವಾಗಿದೆ. ಈ ಯುದ್ಧದಲ್ಲಿ ನಮಗೆ ಗೆಲುವಾಗುವುದೆಂಬ ಭರವಸೆಯೂ ನಮಗಿದೆ. ಸಮರಾಂಗಣದಿಂದ ಖಂಡಿತವಾಗಿಯೂ ಸಂತೋಜಿಯ ತಲೆಯನ್ನು ತರಿಸಿಕೊಡುತ್ತೇನೆ; ದುರ್ಗದ ಆ ಬಯಲಿನಲ್ಲಿ ಆ ತಲೆಯ ಚೆಂಡಾಟವಾಡಿ, ನಿಮ್ಮ ಬಯಕೆಯನ್ನು ತೀರಿಸಿಕೊಳ್ಳಿ. ಅದಕ್ಕಾಗಿ ನೀವು ಸಮರ ಮುಖಕ್ಕೆ ಹೋಗಬೇಕಾದ ಅಗತ್ಯವಿಲ್ಲ. ನಿಮ್ಮ ಪ್ರತೀಕಾರ ಪ್ರತಿಜ್ಞೆಯನ್ನು ಪೂರೈಸಲು ಈಗ ದುರ್ಗದ ಸೇನೆಯೇ ಬದ್ಧವಾಗಿದೆ. ನೀವಿಲ್ಲಿ, ಹಾಯಾಗಿ ನಿಮ್ಮ ಕೆಲಸ ಮಾಡಿ.”

—ಎಂದರು ನಾಯಕರು.

“ ಉಹೂಂ. ಅದು ಸಾಧ್ಯವಿಲ್ಲ.”

“ ಯಾವುದು ಸಾಧ್ಯವಿಲ್ಲ ?”

“ ನಾನಿಲ್ಲಿ ನಿಲ್ಲುವುದು.”

“ ಏಕೆ ?”

“ ಪರರಿಂದ ನನ್ನ ಪ್ರತಿಜ್ಞೆಯನ್ನು ಪೂರೈಸಿಕೊಳ್ಳುವ ಇಚ್ಛೆ ನನಗಿಲ್ಲ. ನನ್ನ ಶಪಥವನ್ನು ಪೂರ್ಣಗೊಳಿಸುವ, ಇಲ್ಲವೇ ಆ ಪ್ರಯತ್ನದಲ್ಲಿ ಮಡಿಯಬಲ್ಲ ಬಲ ನನ್ನ ತೋಳುಗಳಲ್ಲಿದೆ. ಆ ಕಾರ್ಯಕ್ಕಾಗೇ, ಬಯಲಿನಲ್ಲಿ ಭಿಕಾರಿಯಂತೆ ಸಾಯಬೇಕಾಗಿದ್ದ ನನ್ನನ್ನು ಉಳಿಸಿ, ಭಗವಾನ್ ಏಸು

ನಿಮ್ಮಲ್ಲಿಗೆ ಕರೆತಂದಿದ್ದಾನೆ ಎಂದೇ ನಾನು ನಂಬಿದೇನೆ. ಆದುದರಿಂದ ದಯವಿಟ್ಟು ನನಗೆ ನಿಮ್ಮ ಸೇನೆಯೊಡನೆ ಹೊರಡಲು ಅವಕಾಶ ಕೊಡಿ. ಯಾವುದೇ ಕಾರಣಕ್ಕಾಗಿ ನಿಮಗೆ ಅದು ಒಪ್ಪಿಗೆ ಇಲ್ಲದಿದ್ದಲ್ಲಿ, ಹಿಂದೆ ನಾನು ಕೇಳಿದಂತೆ, ಒಂದು ಕತ್ತಿ, ಒಂದು ಕುದುರೆ—ಇಷ್ಟನ್ನು ಅನುಗ್ರಹಿಸಿ.

—ಅಚಲ ನಿಶ್ಚಯದ ಧ್ವನಿಯಲ್ಲಿ ಹೇಳಿದ ಜರ್ಾ ಡ್ಯುವ್ರೋರೋ. ಆತನ ಮಾತಿನ ರೀತಿಯಿಂದಲೇ, ತಾವು ಎಷ್ಟೇ ಪ್ರಯತ್ನಪಟ್ಟರೂ, ಆತನನ್ನು ಕೃತನಿಶ್ಚಯದಿಂದ ಕದಲಿಸಲು ಸಾಧ್ಯವಾಗುವುದಿಲ್ಲವೆಂಬುದನ್ನು ಅರ್ಥ ಮಾಡಿಕೊಂಡ ನಾಯಕರು—

"ಆಯಿತು. ನೀವಿಷ್ಟು ಕಠೋರ ನಿಶ್ಚಯ ಮಾಡಿರುವುದಾದರೆ, ನಿಮ್ಮ ಪ್ರತಿಜ್ಞಾಪಥದಲ್ಲಿ ಅಡ್ಡ ನಿಲ್ಲಲು ನಮಗೂ ಮನಸ್ಸಿಲ್ಲ. ನಮ್ಮ ಸೇನೆಯೊಂದಿಗೆ ನೀವೂ ಹೊರಡಬಹುದು. ಆ ಬಗ್ಗೆ ಬೊಮ್ಮಣ್ಣನವರಿಗೂ ಸುದ್ದಿ ಕಳಿಸುತ್ತೇನೆ. ಆ ಇಬ್ಬರೊಂದಿಗೆ ನೀವೂ ಮೂರನೆಯ ಫೌಜುದಾರ ರಾಗಿ ಹೋಗಿಬನ್ನಿ. ನಾವು ಭಗವಂತನಲ್ಲಿ ಪ್ರಾರ್ಥಿಸುವುದಿಷ್ಟೆ: ನಿಮ್ಮ ಪ್ರಣ್ಣೆ ಸಾರ್ಥಕವಾಗಿ, ನಿಮ್ಮ ಮೈಯ ಕೂದಲೂ ಕೊಂಕದಂತೆ ಹಿಂದಿರುಗಿ ಬರುವಂತಾಗಲಿ."

—ಎಂದರು ದುಃಖ ಮಿಶ್ರಿತ ಧ್ವನಿಯಲ್ಲಿ.

"ನನ್ನ ಬಗ್ಗೆ ಪ್ರಭುಗಳು ಚಿಂತಿಸಬಾರದು. ನಾನು ಜೀವಂತನಾಗಿ ಫಲಿತ ಪ್ರತಿಜ್ಞನಾಗಿ ಹಿಂದಿರುಗಿ, ಪ್ರಭುಗಳು ನನಗೊಪ್ಪಿಸಿದ ಕಾರ್ಯವನ್ನು ಕೈಯಾರೆ ಮುಗಿಸಬೇಕು. ಎಂಬ ಬಯಕೆ ನನಗಿದೆ. ಇದರ ಮೇಲೆ ದೈವೇಚ್ಛೆ-ಎಂತಿದ್ದರೆ ಅಂತಾಗಲಿ. ಹೋಗುವ ಮುನ್ನ, ನಾನು ಮಾತು ಕೊಟ್ಟಂತೆ ನಕ್ಷೆಗಳನ್ನೆಲ್ಲಾ ಸಿದ್ಧಪಡಿಸಿಕೊಟ್ಟು ಹೋಗುತ್ತೇನೆ. ಹಿಂದಿರುಗಿ ಬಂದರೆ ಸರಿ - ಇಲ್ಲವಾದಲ್ಲಿ ಪ್ರಭುಗಳು ನನ್ನ ಕೃತಜ್ಞತಾಪೂರ್ವಕ ನಮಸ್ಕಾರ ಗಳನ್ನು ಒಪ್ಪಿಸಿಕೊಳ್ಳಬೇಕು. ತಮ್ಮಂಥ ಉದಾರ ಚಿತ್ತದ ಪ್ರಭುಗಳ ದರ್ಶನ, ಪರಿಚಯ, ಸಖ್ಯ, ಸೇವಾವಕಾಶ ಲಭ್ಯವಾದುದು ನನ್ನ ಜನ್ಮದ ಮಹದ್ಭಾಗ್ಯ"

— ಎಂದು ನಾಯಕರಿಗೆ ಮುಜುರೆ ಮಾಡಿದ ಜರ್ಾ.

ಆತನ ಮಾತನ್ನು ಕೇಳಿ ನಾಯಕರ ಕಣ್ಣಿನಲ್ಲಿ ದುಃಖದ ಹನಿ ಮೂಡಿತು.

"ಈ ಸಮಯದಲ್ಲಿ ನಾವು ಹೆಚ್ಚೇನೂ ಹೇಳಲಾರೆವು. ಹೇಳುವುದಿಷ್ಟೆ ಬಂಧು, ವಿಜಯಿಯಾಗಿ ಬಾ."

— ಎಂದು ತಮಗೆ ನಮಸ್ಕರಿಸಲು ಬಾಗಿದ ಜಾ‍ರ್ಜ್ ಡ್ಯುವೋರೋನನ್ನು, ಎತ್ತಿ ಎದೆಗಪ್ಪಿಕೊಂಡು ಆಲಂಗಿಸಿಕೊಂಡರು.

" ನಮ್ಮ ಸೇನೆಗೆ ಸೋಲಾದರೂ ಚಿಂತೆಯಿಲ್ಲ, ನಿನ್ನ ಪ್ರತಿಜ್ಞೆ ಪೂರ್ಣವಾಗಲಿ."

ನಾಯಕರಾಡಿದ ಮಾತುಗಳನ್ನು ಕೇಳಿ ಜಾರ್ಜನ ಕಣ್ಣುಗಳಲ್ಲೂ ನೀರು ಧಾರೆಗಟ್ಟಿ ಹರಿಯಿತು.

೭

ತಾನು ಸೇನೆಯೊಂದಿಗೆ ಹೊರಡಬಹುದೆಂಬ ಅನುಮತಿಯನ್ನು ನಾಯಕರಿಂದ ಪಡೆದ ಜಾರ್ಜ್ ಡ್ಯುವೋರೋಗೆ, ಅದರಿಂದ ಇಬ್ಬಗೆಯ ತೃಪ್ತಿಯಾಗಿತ್ತು.

ತನ್ನ ಹೃದಯದಲ್ಲಿ ಸಂತೋಜಿ ಘೋರ್ಪಡೆಯ ಪಿಶಾಚಕತೆಯ ಬಗ್ಗೆ ದಹಿಸುತ್ತಿದ್ದ ಪ್ರತೀಕಾರ ತೃಷೆಯನ್ನು ತೃಪ್ತಿಗೊಳಿಸಿಕೊಳ್ಳುವ ಕಾಲ ಸನ್ನಿಹಿತವಾಯಿತೆಂಬುದು, ಒಂದು ಬಗೆಯ ತೃಪ್ತಿಗೆ ಕಾರಣವಾಗಿದ್ದರೆ, ' ಇನ್ನು ನಾನು ಈ ದುರ್ಗದಲ್ಲಿರಬೇಕಾದುದಿಲ್ಲ. ಇಲ್ಲಿಂದ ದೂರ, ಬಹಳ ದೂರ ಹೊರಟು ಹೋಗಬಹುದು ' ಎಂಬ ನಿರೀಕ್ಷೆ ಮತ್ತೊಂದು ಬಗೆಯ ತೃಪ್ತಿಗೆ ಕಾರಣವಾಗಿತ್ತು.

ಆದಷ್ಟು ಬೇಗ, ಆದಷ್ಟು ದೂರ ಚಿತ್ರದುರ್ಗದಿಂದ ಹೋಗಬೇಕು ಎಂಬ ಜಾರ್ಜ್ ಡ್ಯುವೋರೋನ ಬಯಕೆಗೆ ಕಾರಣ—ಮೆಹರ್ ಬಾನುವಿನ ಲಾವಣ್ಯ, ಅವನ ಚಿತ್ತದಲ್ಲಿ ಮೂಡಿಸಿದ ಅಶಾಂತಿ.

ನಾಯಕರ ಅರಮನೆಯಲ್ಲಾದ ಸಂಗೀತ ಸಭೆಯಲ್ಲಿ ಮೆಹರ್ ಬಾನುವಿನ ಅನಾದೃಶ ಸೌಂದರ್ಯವನ್ನು ಕಂಡು, ಅವಳ ಕಲಕಂಠದ ಗಾಯನವನ್ನು ಕೇಳಿದ ಗಳಿಗೆಯಿಂದ, ಅವನ ಹೃದಯ, ಚಿತ್ತಗಳು ಅವನದಾಗಿ ಉಳಿದಿರಲಿಲ್ಲ.

ರೋಸಿಟಾಳ ಮರಣದ ದಿನ ಅವನ ಹೃದಯದಲ್ಲಿ ಉರಿದುಹೋಗಿ, ಇಷ್ಟು ದಿನ ಅವನ ಮನದ ಮರಳುಗಾಡಿನಲ್ಲಿ, ತಾನಿರುವ ಸುಳಿವನ್ನೇ ಕೊಡದಂತೆ,

ತಲೆಮರೆಸಿಕೊಂಡಿದ್ದ ಪ್ರೇಮಾಕಾಂಕ್ಷೆ, ಈಗ, ಇಷ್ಟು ವರ್ಷಗಳ ಬಳಿಕ, ಮೆಹರ್‌ಬಾನುವಿನ ಮುಖದ ಸಂಜೀವಿನಿ ದರ್ಶನದಿಂದ ಮತ್ತೆ ಸಚೇತನವಾಗಿ, ದಳ್ಳುರಿಯಾಗಿ ಅವನ ಮೈ-ಮನಗಳನ್ನು ದಹಿಸಲಾರಂಭಿಸಿತ್ತು.

"ಮೆಹರ್........ಮೆಹರ್........ಮೆಹರ್........"

ಅವನ ಹೃದಯಕ್ಕೆ ಆ ಮಧುರ ಹೆಸರಿನ ಧ್ಯಾನ.

ಅವನ ಕಣ್ಣುಗಳಿಗೆ ಅವಳ ರೂಪದ ಧ್ಯಾನ.

ಅವನ ಮೈಯ ನರನರಕ್ಕೆ, ಅವಳನ್ನು ಕಾಣುವ, ಕೂಡುವ, ಆಲಂಗಿಸುವ, ಅವಳೊಡನೆ ಸರಸ-ಸಲ್ಲಾಪ ನಡೆಸುವ ಉತ್ಕಟಾಕಾಂಕ್ಷೆ.

ಆ ಪ್ರಣಯೋನ್ಮಾದ ಉಲ್ಬಣಿಸಿದಾಗ ನಟ್ಟಿರುಳಿನಲ್ಲೂ, ಎದ್ದುಹೋಗಿ ಮೆಹರ್‌ಬಾನುವಿನ ಪದತಲದಲ್ಲಿ ತನ್ನ ಪ್ರಣಯನಿವೇದನೆ ಮಾಡಬೇಕು ಎಂಬ ಉನ್ಮತ್ತ ಬಯಕೆ ಅವನನ್ನು ಕಾಡುತ್ತಿತ್ತು.

ಅವನಿಗೆ ಮೆಹರ್‌ಬಾನುವಿನ ಬಗ್ಗೆ ಎಷ್ಟು ಉನ್ಮತ್ತ ಪ್ರೇಮವಿತ್ತೋ, ಅಷ್ಟೇಮಟ್ಟಿಗೆ ತನ್ನ ಆಕಾಂಕ್ಷೆ ಅಸಹಜವೆನ್ನುವ ಅರಿವೂ ಇತ್ತು.

ವಿಚಾರಿಸಿ ನೋಡಿದರೆ—

ಅವನ ಬಾಳಿನಲ್ಲಿ ಮೆಹರ್‌ಬಾನು ಬೇಸಿಗೆಯಲ್ಲಿ ಸುಳಿದ ಆಕಸ್ಮಿಕ ತಂಗಾಳಿಯಂತೆ: ಅದು ಬರುವುದೆಂಬ ನಿರೀಕ್ಷೆಯೂ ಇರಲಿಲ್ಲ ; ಅದು ಹೆಚ್ಚು ಕಾಲ ಉಳಿಯುವುದೆಂಬ ಭರವಸೆಯೂ ಇರಲಿಲ್ಲ. ಹಾಗೆ ಬಂದು ಹೀಗೆ ಹೊರಟುಹೋಗುವ ಕನ್ಮೂಲರು.

ಅಂಥವಳನ್ನು ಪ್ರೀತಿಸುವುದಾಗಲಿ, ವಿದೇಶಿಯಾದ ತಾನು ಆಕೆಗೆ 'ನಿನ್ನನ್ನು ನಾನು ಪ್ರೀತಿಸುತ್ತೇನೆ' ಎಂದು ಹೇಳುವುದಾಗಲಿ, ಅಸಹಜವಾದುದಷ್ಟೇ ಅಲ್ಲ, ಅಸಾರ್ಥಕವಾಗಲೆಂದೇ ಹುಟ್ಟಿದ ಹುಸಿ ಬಯಕೆ.

ಈ ಮಾತು ಮನವರಿಕೆಯಾಗಿ ಜಾರ್ಜಿಗೆ ಮೆಹರ್‌ಬಾನು ಇರುವ ಚಿತ್ರದುರ್ಗದಲ್ಲಿ ತಾನೂ ಇರುವುದು ಅಸಹ್ಯವೆನಿಸಿತ್ತು. ಎಷ್ಟೋಬಾರಿ ತನಗೆ ತಾನೇ 'ಆಕೆ ಒಮ್ಮೆ ಈ ಊರು ಬಿಟ್ಟುಹೋಗಬಾರದೇ ?' ಎಂದು ಹಾರೈಸಿದ್ದ.

ಮತ್ತೊಮ್ಮೆ ಅವಳ ಮುಖಾರವಿಂದದ ದರ್ಶನವಾದರೆ, ತನ್ನ ಚಿತ್ತದ ಸಂಯಮ ಉಳಿಯಲಾರದೆಂಬ ಭಯದಿಂದಲೇ, ಅವಳನ್ನು ನೋಡಬೇಕೆಂದು ಅವನ ಮನಸ್ಸು ಹಾತೊರೆಯುತ್ತಿದ್ದರೂ, 'ಮತ್ತೊಮ್ಮೆ ಬನ್ನಿ'

ಎಂದು ಮೆಹರ್‌ಬಾನುವೇ ಆಹ್ವಾನವಿತ್ತಿದ್ದರೂ, ಜಾರ್ಜ್ ಮೆಹರ್‌ಬಾನುವಿನ ಬಿಡಾರದತ್ತ ಸುಳಿದಿರಲಿಲ್ಲ.

'ಅವಳನ್ನು ನೋಡುವುದು ಬೇಡ. ಮತ್ತೊಮ್ಮೆ ಅವಳ ಮುಖದರ್ಶನವಾಗದಿದ್ದರೆ ಸಾಕು–ಮತ್ತೆ ನಗೆಗೀಡಾಗುವುದು ತಪ್ಪುತ್ತದೆ.' ಎಂದುಕೊಂಡು ಮೆಹರ್‌ಬಾನು ಎಷ್ಟು ಬೇಗ ಚಿತ್ರದುರ್ಗದಿಂದ ಹೊರಡುವಳೋ ಎನ್ನುವುದನ್ನೇ ನಿರೀಕ್ಷಿಸುತ್ತಿದ್ದ.

ಆದರೆ ಅವಳು ಹೋಗುವುದು, ಬಿಡುವುದು, ಜಾರ್ಜನ ಇಷ್ಟಾನಿಷ್ಟವನ್ನು ಅವಲಂಬಿಸಿರಲಿಲ್ಲವಾದುದರಿಂದ, ಜಾರ್ಜ್ ಆದಷ್ಟು ಬೇಗ ಚಿತ್ರದುರ್ಗದಿಂದ ಹೊರಟುಹೋಗಬೇಕು ಎಂದು ನಿರ್ಧರಿಸಿದ್ದ.

ಈಗ —

ಸಂತೋಜಿ ಘೋರ್ಪಡೆಯ ದಂಡಯಾತ್ರೆಯ ಪ್ರಸಂಗವನ್ನು ತಂದೊಡ್ಡಿ ದೇವರೇ ಅವನಿಗೆ ಚಿತ್ರದುರ್ಗದಿಂದ ದೂರ ಹೋಗಲು ಅತ್ಯುತ್ತಮವಾದ ಅವಕಾಶವನ್ನು ಕಲ್ಪಿಸಿದ್ದ.

ಈ ಸುಸಂಧಿಯನ್ನು ಉಪಯೋಗಿಸಿಕೊಂಡು, ಆದಷ್ಟು ಬೇಗ ಚಿತ್ರದುರ್ಗವನ್ನು ಬಿಟ್ಟು, ಪ್ರತೀಕಾರ ತೃಷೆಯಲ್ಲಿ ಪ್ರಣಯ ದಾಹವನ್ನು ಮರೆಯುವ ಇಚ್ಛೆಯಿಂದ ಜಾರ್ಜ್, ಊಟ ನಿದ್ರೆಯನ್ನು ಬಿಟ್ಟು, ಅವಸರವಸರವಾಗಿ ಕೋಟೆಯನ್ನು ಬಲಪಡಿಸಲು ಆಗಬೇಕಾದ ಕೆಲಸಗಳ ನಕ್ಷೆಯನ್ನು ತಯಾರಿಸುತ್ತಿದ್ದ.

ಒಂದು ದಿನ ಸಂಜೆ, ಸೂರ್ಯಾಸ್ತಮಯವಾಗಿ ಸ್ವಲ್ಪ ಸಮಯವಾದ ನಂತರ ಜಾರ್ಜ್, ಆಳು ಹೊತ್ತಿಸಿ ತಂದಿಟ್ಟು ಹೋದ ಬೆಳಕಿನಲ್ಲಿ ನಕ್ಷೆಯನ್ನು ಬರೆಯುತ್ತಾ, ಆ ಕೆಲಸದಲ್ಲೇ; ತನ್ಮಯವಾಗಿ ಕುಳಿತ್ತಿದ್ದ. ಅವನು ಹಾಗೆ ಕುಳಿತಿರುವಾಗಲೇ, ತಾನು ತಾನಾಗಿಯೇ ಕರೆಯುವವರೆಗೂ, ನಡುವೆ ಬಂದು ತನ್ನ ಕೆಲಸಕ್ಕೆ ವಿಘ್ನ ತರಬಾರದೆಂದು ಅಪ್ಪಣೆ ಮಾಡಿ ಕಳಿಸಿದ ಆಳು ಒಳಗೆ ಬಂದು —

" ಸರಕಾರ್........"

— ಎಂದು ಕರೆದು ಜಾರ್ಜನ ಲಕ್ಷ್ಯವನ್ನು ತನ್ನತ್ತ ಸೆಳೆದ.

" ಏನು ?"

— ಉಕ್ಕಿದ ಅಸಹನೆಯಿಂದ ಸಿಡಿಮಿಡಿಯಾಗುತ್ತಾ ಕೇಳಿದ ಜಾರ್ಜ್.

"ತಮ್ಮನ್ನು ನೋಡಬೇಕೆಂದು ಯಾರೋ ಬಂದಿದ್ದಾರೆ...."

—ಜಾರ್ಜನ ಅಸಹನೆಯನ್ನು ಕಂಡು ಆಳು ಹೆದರುತ್ತಲೇ ಹೇಳಿದ.

"ಛತ್ತೆ! ಮುಠ್ಠಾಳ!! ಈಗ ಯಾರನ್ನೂ ನೋಡುವುದಿಲ್ಲ ಎಂದು ಹೇಳಿರಲಿಲ್ಲವೇ? ಇಷ್ಟು ಬೇಗ ನನ್ನ ಅಪ್ಪಣೆ ಮರೆತು ಹೋಯಿತೇ?...."

"ನಾನು ಆ ಮಾತನ್ನು ಹೇಳಿದೆ ಸರಕಾರ್...."

"ಆದರೂ ಅವರು ಅದನ್ನು ಕೇಳಲಿಲ್ಲ, ಅಲ್ಲವೇ? ಹೋಗು, ಮತ್ತೊಮ್ಮೆ ಅವರಿಗೆ ಅದೇ ಮಾತು ಹೇಳಿ ಆಚೆಗೆ ಅಟ್ಟು. ನನಗೀಗ ಯಾರನ್ನು ನೋಡುವುದಕ್ಕೂ ಸಮಯವಿಲ್ಲ."

— ಸಿಟ್ಟಿನಿಂದ ಅಬ್ಬರಿಸಿ ಹೇಳಿದ ಜಾರ್ಜ.

"ಆ ಮಾತನ್ನು ಆಳಿನ ಕೈಲಿ ಹೇಳಿ ಕಳಿಸಿ ನನ್ನನ್ನು ಅಪಮಾನಿಸ ಬೇಕಾದ ಅಗತ್ಯವಿಲ್ಲ. ತಮ್ಮ ಬಾಯಿಂದಲೇ ಕೇಳಿಯಾಯಿತು. ನನ್ನಿಂದ ಆದ ಅಪಚಾರವನ್ನು ಮನ್ನಿಸಬೇಕು."

—ಎಂದು ಸನಿಹದಲ್ಲೇ ಸ್ತ್ರೀಕಂಠವೊಂದು ಹೇಳಿದುದು ಕೇಳಿ, ಜಾರ್ಜ ನಿಬ್ಬೆರಗಾಗಿ ಧಡಕ್ಕನೆ ಎದ್ದು ನಿಂತು, ಆ ಧ್ವನಿ ಬಂದ ಕಡೆಗೆ ನೋಡಿದ.

ಆ ಧ್ವನಿಯನ್ನು ಕೇಳುತ್ತಿದ್ದಹಾಗೇ ಜಾರ್ಜಗೆ ಅದು ಮೆಹರ್‌ಬಾನುವಿನ ಧ್ವನಿಯೆಂದು ಗುರುತುಹತ್ತಿ ಅಚ್ಚರಿ, ದಿಗ್ಭ್ರಾಂತಿ, ಅನುಮಾನಗಳಲ್ಲಿ ತೊಳಲುತ್ತಾ

"ಆಪ್.... ಆಪ್.... ಬಾನುಸಾಹಿಬಾ.... ಮಾಫ್ ಕೀಜಿಯೇ...."

—ಎಂದು ತೊದಲುತ್ತಾ ತನ್ನಷ್ಟೇ ದಿಗ್ಭ್ರಾಂತನಾಗಿ ನಿಂತ ಆಳಿಗೆ—

"ಚಲೇ ಜಾವ್ ಇಧರ್‌ಸೆ" (ಇಲ್ಲಿಂದ ತೊಲಗು)

—ಎಂದು ಅಪ್ಪಣೆ ಮಾಡಿದ.

"'ಚಲೇ ಜಾವ್' ಇದು ನನಗೂ ಅಪ್ಪಣೆಯೇ?"

—ಗಂಭೀರಧ್ವನಿಯಲ್ಲಿ ಕೇಳಿದಳು ಮೆಹರ್‌ಬಾನು.

"ಈಗಾಗಲೇ ನಾಚಿರುವ ನನ್ನನ್ನು ಮತ್ತಷ್ಟು ನಾಚಿಸಬೇಡಿ ಬಾನು ಸಾಹಿಬಾ.... ಆ ಅಪ್ಪಣೆ ಆಳಿಗೆ, ನಿಮಗಲ್ಲ. ಕುಳಿತುಕೊಳ್ಳಿ?"

—ಎಂದು ಬೇಡಿದ ಜಾರ್ಜ.

ಜಾರ್ಜ ಅಪ್ಪಣೆಯಂತೆ ಆಳು ಅಲ್ಲಿಂದ ಹೊರಟುಹೋದ.

ಮೆಹರ್‌ಬಾನುವಿಗೆ ಜಾರ್ಜ ಕುಳಿತುಕೊಳ್ಳಲು ಹೇಳಿದ್ದ. ಆದರೆ ಆ ಕೊಠಡಿಯಲ್ಲಿ ಜಾರ್ಜ ಕುಳಿತುಕೊಂಡಿದ್ದ ಆಸನವೊಂದಲ್ಲದೆ ಬೇರಾವ

ಆಸನವೂ ಇರಲಿಲ್ಲ. ಎಂತಲೇ ಆಕೆ ನಿಂತೇ ಇದ್ದಳು. ಆಕೆ ನಿಂತಿದ್ದುದನ್ನು ಕಂಡು ಜರ್ಾಗೆ ತನ್ನ ಮನೆಯ ಪೀಠೋಪಕರಣದ ಅಭಾವ ಅರಿವಾಗಿ, ಆ ಲಜ್ಜೆಯನ್ನು ಆದಷ್ಟು ಮುಚ್ಚಿಕೊಳ್ಳುತ್ತಾ—

"ಇದು ದಿವಾನ್ ಖಾನೆಯಲ್ಲ, ನನ್ನ ಕೆಲಸದ ಮನೆ. ಆದುದರಿಂದ ಇಲ್ಲಿ ಹೆಚ್ಚು ಆಸನಗಳಿಲ್ಲ. ಇರುವ ಪೀಠದಲ್ಲಿ ತಾವು ಕುಳಿತುಕೊಳ್ಳಬೇಕು."

—ಎಂದು ಹೇಳಿದ.

"ನೀವು...."

"ನನಗೆ ಬೆಳಗಿನಿಂದಲೂ ಕುಳಿತು ಕುಳಿತು ಬೇಸರವಾಗಿದೆ. ಆದ್ದರಿಂದ ಸ್ವಲ್ಪ ಹೊತ್ತು ನಿಂತಿದ್ದರೂ ತೊಂದರೆಯೇನೂ ಇಲ್ಲ'"

"ಅಂತೂ........ಆದಷ್ಟು ಬೇಗ ನನ್ನನ್ನು ಇಲ್ಲಿಂದ ಅಟ್ಟಬಿಡುವ ನಿಮ್ಮ ಯೋಚನೆಯನ್ನು ನೀವಿನ್ನೂ ಬಿಟ್ಟಿಲ್ಲವೆನ್ನಿ........"

—ಮೃದುವಾಗಿ ನಗುತ್ತಾ ಕೇಳಿದಳು ಮೆಹರ್ ಬಾನು.

"ಅಂಥ ಯೋಚನೆ ನನ್ನಲ್ಲಿದ್ದರೆ, ನಾನಿಲ್ಲೇ ಸುಟ್ಟು ಬೂದಿಯಾಗಬೇಕು!........"

—ಎಂದು ಜರ್ಾ ಏನೋ ಹೇಳ ಹೋದ.

"ಛಿ!........ಮತ್ತೊಮ್ಮೆ ಅಂಥ ಮಾತಾಡಬೇಡಿ."

—ತಟಕ್ಕನೆ ಉದ್ರಿಕ್ತಳಾಗಿ, ಆತನ ಮಾತು ಮುಗಿಯುವ ಮುನ್ನವೇ ಅತಿ ಕಾತರ ಸ್ವರದಲ್ಲಿ ಹೇಳಿದಳು ಮೆಹರ್ ಬಾನು.

ಆಕೆಯ ಕಾತರ ಸ್ವರವನ್ನು ಕೇಳಿ, ಆ ಮಾತನ್ನಾಡಲು ಎದ್ದು ನಿಂತಾಗ, ಆಕೆ ಮುಖದ ಮೇಲೆ ಧರಿಸಿದ ಅವಗುಂಠನ ಸರಿದು ಅದರ ಮರೆಯಿಂದ ಆಕೆಯ ಭೀತ ಮುಖ ಮುದ್ರೆಯನ್ನು ಕಂಡು, ಜರ್ಾನ ಮೈಯಲ್ಲಿ ಇದ್ದಕ್ಕಿದ್ದ ಹಾಗೆ ಮಿಂಚು ಸಂಚರಿಸಿದಂತಾಗಿ, ಅವನ ಮೈ ರೋಮಾಂಚನವಾಯಿತು.

"ಕುಳಿತುಕೊಳ್ಳಿ. ನನ್ನ ಮಾತಿನ ದುಡುಕನ್ನು ಬಾನು ಸಾಹಿಬಾ ಅವರು ಮನ್ನಿಸಬೇಕು. ಸುಟ್ಟು ಬೂದಿಯಾಗುವ ಇಚ್ಛೆ ನನಗೂ ಇಲ್ಲ. ಆದರೂ ನನ್ನ ಬಗ್ಗೆ ತಾವು ವ್ಯಕ್ತಪಡಿಸಿದ ಆಸ್ಥೆಗಾಗಿ ನಾನು ಆಭಾರಿ........ ಕುಳಿತುಕೊಳ್ಳಿ........ ನಿಂತು ನಿಮ್ಮ ಕೋಮಲಪಾದಗಳನ್ನು ದಣಿಸಬೇಡಿ.... ಈಗ ಹೇಳಿ.... ಈ ಸೇವಕನಿಂದ ಏನು ಕೆಲಸವಾಗಬೇಕಿತ್ತು?"

ಜರ್ಾನ ಮಾತಿನಂತೆ ಪುನಃ ಕುಳಿತುಕೊಂಡ ಮೆಹರ್ ಬಾನು ಆತನ ಪ್ರಶ್ನೆಗೆ ಅಷ್ಟು ಹೊತ್ತು ಏನೂ ಉತ್ತರ ಕೊಡದೆ, ಏನೋ ಯೋಚಿಸುತ್ತಿದ್ದು

ಬಳಿಕ, ಹೊರಬರಲಾರೆನೆನ್ನುವ ಧ್ವನಿಯನ್ನು ಬಲವಂತನಾಗಿ ಹೊರತಂದು ಕೇಳಿದಳು —

"ನನ್ನನ್ನು ನೀವು ಅಧಿಕ ಪ್ರಸಂಗಿ ಎನ್ನುವುದಿಲ್ಲವಾದರೆ ಒಂದು ಪ್ರಶ್ನೆಯನ್ನು ಕೇಳಬೇಕೆಂದು ಬಂದಿದ್ದೇನೆ"

"ಏನು.... ಕೇಳಿ"

"ದುರ್ಗದಿಂದ ಹೋಗುವ ಸೇನೆಯೊಂದಿಗೆ.... ನೀವು .. ಹೋಗುವ.... ನಿಶ್ಚಯ ಮಾಡಿದ್ದೀರಂತೆ.... ಇದು ನಿಜವೇ?"

ಮೆಹರ್‌ಬಾನು ಕೇಳಿದ ಆ ಅನಿರೀಕ್ಷಿತವಾದ ಪ್ರಶ್ನೆಯನ್ನು ಕೇಳಿ ಜಾರ್ಜ ಚಕಿತನಾದ.

ಆದಿನದ ಮೆಹರ್‌ಬಾನುವಿನ ಅನಿರೀಕ್ಷಿತ ಆಗಮನ, ಅವಳ ಅರ್ಥವಾಗದ ರೀತಿ, ಪ್ರಶ್ನೆ-ಒಂದೊಂದೂ ಜಾರ್ಜನನ್ನು ಅಚ್ಚರಿಗೀಡು ಮಾಡಿ, ಅವನಿಗೆ ತೀರಾ ಅಪರಿಚಿತವಾದ, ಹೆಜ್ಜೆಹೆಜ್ಜೆಗೂ ಕುಸಿಯುತ್ತಿರುವ ಹೊಸ ನೆಲದಲ್ಲಿ ನಡೆಯುತ್ತಿರುವಂತೆ ಭಾಸವಾಯಿತು. ಆ ಆಶ್ಚರ್ಯದ ದಿಗ್ಭ್ರಾಂತಿಯಲ್ಲೇ ತೊಳಲುತ್ತಾ ಬೇರೇನೂ ಹೇಳಲು ತೋಚದೆ —

"ಅದು ನಿಮಗೆ ಹೇಗೆ ತಿಳಿಯಿತು ?"

— ಎಂದು ಕೇಳಿದ.

ಆ ಪ್ರಶ್ನೆಗೆ ಉತ್ತರವಾಗಿ ಮೆಹರ್‌ಬಾನು, ಜಾರ್ಜನ ಮುಖಭಾವದಿಂದ ಅವನ ಪ್ರಶ್ನೆಯ ಹಿಂದಿನ ಭಾವವನ್ನು ಅರಿಯಲೆತ್ನಿಸುವಂತೆ ಅವನ ಮುಖವನ್ನು ನೋಡಿ —

"ತಿಳಿದುಕೊಳ್ಳಬೇಕೆಂಬ ಮನಸ್ಸು, ಆಸಕ್ತಿ ಇದ್ದರೆ ಯಾವ ವಿಷಯವನ್ನು ತಾನೇ ತಿಳಿದುಕೊಳ್ಳುವುದು ಅಸಾಧ್ಯ ?"

— ಎಂದು ಬದಲು ಹೇಳುವಂತೆ ಹೇಳಿದಳು.

"ಅದು ಸರಿಯೆ. ಆದರೂ ನನ್ನಂಥ ಸಾಮಾನ್ಯ ಅಪರಿಚಿತನ ವಿಷಯದಲ್ಲಿ ತಾವು ತೋರುತ್ತಿರುವ ಆಸಕ್ತಿಗಾಗಿ ನಾನು ಋಣಿಯಾಗಿದ್ದೇನೆ."

"ಆ ಮಾತು ಹಾಗಿರಲಿ – ನಾನು ಮೊದಲು ಕೇಳಿದ ಪ್ರಶ್ನೆಗೆ ನೀವು ಉತ್ತರವನ್ನೇ ಕೊಡಲಿಲ್ಲವಲ್ಲ.... ಕರೆದರೆ ಬರಬಾರದು, ಪ್ರಶ್ನೆ ಕೇಳಿದರೆ ಉತ್ತರ ಕೊಡಬಾರದು ಎಂಬ ವ್ರತವನ್ನೇನಾದರೂ ಹಿಡಿದಿದ್ದೀರಾ ? ಅಥವಾ ನನ್ನೊಬ್ಬಳ ವಿಷಯದಲ್ಲಿ ತಾವು ಆ ನಿಯಮವನ್ನು ಅನುಸರಿಸುತ್ತಿರುವಿರಾ ?"

—ನಸುಭಾರವಾದ ಧ್ವನಿಯಲ್ಲಿ ಕೇಳಿದಳು, ಮೆಹರ್ ಬಾನು.

ಅವಳ ಮಾತನ್ನು ಕೇಳಿ ಜರ್ಾಗೆ ಒಂದು ಕ್ಷಣ ಕಾಲ ಅವಳು ತನ್ನೊಂದಿಗೆ ಹುಡುಗಾಟವಾಡುತ್ತಿರುವಳೇನೋ ಎಂದು ತೋರಿತು. ಆದರೆ ಅವಳ ಭಾರವಾದ ಧ್ವನಿಯಲ್ಲಿ ಹುಡುಗಾಟದ ಕುರುಹೂ ಇರದೆ, ಅದರಲ್ಲಿ ತನ್ನ ಅದೃಷ್ಟವನ್ನು ಹಳಿದುಕೊಳ್ಳುವ ನೋವೇ ಹೆಚ್ಚಾಗಿದ್ದುದು ಅರಿವಾಗಿ ಅವನ ಹೃದಯವನ್ನು ಹಿಸುಕಿದಂತಾಯಿತು. ವಿಚಿತ್ರವಾದ ಆ ನೋವನ್ನು ಭರಿಸಲಾರದೆ—

"ದಯವಿಟ್ಟು....ದಯವಿಟ್ಟು.... ಬಾನುಸಾಹಿಬಾ.... ನನ್ನ ವರ್ತನೆಗೆ ಆ ನಿರ್ದಯತೆ ಆರೋಪವನ್ನು ಹೊರಿಸಬೇಡಿ...."

ಎಂದು ಬೇಡಿದ.

"ಹಾಗಿದ್ದರೆ ಇಷ್ಟು ದಿನ ನಮ್ಮ ಮನೆಯ ಕಡೆಗೇಕೆ ಬರಲಿಲ್ಲ....?"

ಆಕೆಯ ಆ ಪ್ರಶ್ನೆಯ ಇದಿರು ಜರ್ಾ ಮತ್ತೊಮ್ಮೆ ನಿರುತ್ತರನಾದ. ಅದನ್ನು ಕಂಡು ಮೆಹರ್ ಬಾನು—

"ನಾನು ಆಗಲೇ ಹೇಳಲಿಲ್ಲವೇ, ನನ್ನ ಯಾವ ಪ್ರಶ್ನೆಗೂ ಉತ್ತರ ಕೊಡುವ ಮನಸ್ಸು ನಿಮಗಿಲ್ಲ ...ಆದರೆ....ಆದರೆ....ನಿಮ್ಮ ವ್ರತಭಂಗವಾದರೂ ಚಿಂತೆಯಿಲ್ಲ....ಇದೊಂದು ಪ್ರಶ್ನೆಗೆ ಉತ್ತರ ಕೊಡಿ...."

—ಎಂದು ಅನಂತ ಯಾಚನೆಯ ಧ್ವನಿಯಲ್ಲಿ ಕೇಳಿದಳು—

"ನೀವು ಯುದ್ಧಕ್ಕೆ ಹೋಗುವುದು ನಿಜವೇ"

"ನಿಜ."

"ನೀವು....ಹೋಗಲೇಬೇಕೆ ?...."

"ಅಹುದು, ಬಾನುಸಾಹಿಬಾ, ಹೋಗಲೇಬೇಕು.'

"ಏಕೆ ?"

"ಹೋಗದೆ ನನ್ನ ಪ್ರತಿಜ್ಞೆ ತೀರುವಂತಿಲ್ಲ."

"ಅಷ್ಟು....ಅಷ್ಟು....ಅನುಲ್ಲಂಘ್ಯವಾದುದೇ ನಿಮ್ಮ ಪ್ರತಿಜ್ಞೆ... ?"

"ಆ ಪ್ರತಿಜ್ಞೆಯನ್ನು ಪೂರ್ಣಗೊಳಿಸುವುದೊಂದಲ್ಲದೆ, ನನ್ನ ಬಾಳಿನಲ್ಲಿ ಬೇರಾವ ಉದ್ದೇಶವೂ ಇಲ್ಲವಾಗಿರುವುದರಿಂದ, ಅದು ಅನುಲ್ಲಂಘ್ಯವೇ ಆಗಿದೆ...."

ತನ್ನ ಪ್ರಶ್ನೆಗೆ ಜರ್ಾ ಕೊಟ್ಟ ಉತ್ತರವನ್ನು ಕೇಳಿ ಮೆಹರ್ ಬಾನು, ತಲೆತಗ್ಗಿಸಿ, ಮೌನವಾಗಿ ಕುಳಿತಳು. ಅವಳ ಅಲ್ಪ ಕಾಲೀನವಾದ ಮೌನವೂ

ಜಾರ್ಜ ಪಾಲಿಗೆ ಯುಗಯುಗಾಂತರದಷ್ಟು ಹಿರಿದಾದ ಅಸಹ್ಯ ಮೌನವಾಗಿ ಅನಿಸಿ, ಆ ಮೌನದ ಇರಿತವನ್ನು ಸಹಿಸಲಾಗದೆ, ತಾನೇ ಆ ಮೌನವನ್ನು ಮುರಿದು ಕೇಳಿದ—

" ಏಕೆ....ಏಕೆ ಸುಮ್ಮನಾಗಿಬಿಟ್ಟಿರಿ ಬಾನುಸಾಹಿಬಾ ?"

" ನಿಮ್ಮ....ನಿಮ್ಮ....ಬಾಳಿನಲ್ಲಿ....ಆ ಪ್ರತಿಜ್ಞೆಸಲ್ಲದೆ ಬೇರಾವುದಕ್ಕೂ ........ಸ್ಥಾನವೇ ಇಲ್ಲವೇ....ಅದೊಂದೇನೇ ನಿಮ್ಮ....ಬಾಳಿನಲ್ಲಿ....ಉಳಿದಿರುವುದು ?........ಯಾರಿಗಾಗಿಯೂ........ನಿಮ್ಮ........ಪ್ರತಿಜ್ಞೆಯನ್ನು ಮುರಿಯಲಾರಿರಾ ?...."

—ಒಂದೊಂದು ಮಾತನ್ನೂ ಹೃದಯದಾಳದಿಂದ ಎಳೆತಂದು ಕೇಳಿದಳು ಮೆಹರ್ ಬಾನು

ಆ ಒಂದೊಂದು ಮಾತಿನ ಬೆಂಬದಿಯಲ್ಲೂ, ಉದುರದ ಕಣ್ಣೀರಿನ ಹನಿ ಕಂಪಿಸುತ್ತಿತು. ಆಕೆಯ ವಿಚಿತ್ರ ಬೇಡಿಕೆಯನ್ನು ಕೇಳಿ ಜಾರ್ಜನ ತಲೆ ಸುತ್ತಿ ಬಂದಂತಾಯಿತು. ಅವನ ಮಿದುಳಿನ ನರನರದಲ್ಲೂ, ಅವಳನ್ನು ಕಂಗೆಡಿಸುವ ಬಗೆಬಗೆಯ ಭಾವನೆಗಳು ಹರಿದು, ವಿಹ್ವಲನಾಗಿ ಹೇಳಿದ—

" ನಿಮ್ಮ ಮಾತೇ ನನಗೆ ಅರ್ಥವಾಗುತ್ತಿಲ್ಲ....ಬಾನುಸಾಹಿಬಾ.... ಯಾರಿಗಾಗಿ ನಾನು ಪ್ರತಿಜ್ಞೆ ಮುರಿಯಬೇಕು ?"

" ಯಾರಿಗೆ ಎಂದು ಹೇಳಿದರೆ ಮುರಿಯುತ್ತೀರಾ ?"

" ಯಾರಿಗಾಗಿ—ಹೇಳಿ ?"

" ಹೇಳಲೇ...."

ಆ ಮಾತನಾಡುತ್ತಲೇ ಎದ್ದು ನಿಂತು ಮೆಹರ್ ಬಾನು, ಧಿಗ್ಗನೆ ಜಾರ್ಜನ ಪದತಲದಲ್ಲಿ ಕುಳಿತು. ಆತನ ಕಾಲುಗಳನ್ನು ಆಲಂಗಿಸಿ ಹೇಳಿದಳು —

" ನನಗಾಗಿ........ನನಗಾಗಿ........ಯುದ್ಧಕ್ಕೆ ಹೋಗಬೇಡಿ ನಿಮ್ಮನ್ನು ಯುದ್ಧಕ್ಕೆ ಹೋಗಗೊಡಲಾರೆ...."

ಮೆಹರ್ ಬಾನು ಆ ಮಾತು ಮಾತನಾಡುತ್ತಿರುವಾಗ, ಅವಳ ಕಣ್ಣುಗಳಿಂದ ಇಳಿದ ನೀರು ಜಾರ್ಜನ ಪಾದಗಳ ಮೇಲೆ ಹನಿಹನಿಯಾಗಿ ಉರುಳಿ ತೋಯಿಸುತ್ತಿತ್ತು.

" ಹೇಳಿ....ಹೇಳಿ....ನನಗಾಗಿ ಅಷ್ಟು ಮಾಡಲಾರಿರಾ ?"

ಅನಿರೀಕ್ಷಿತವಾದ ಆ ಘಟನೆಯಿಂದ ಸಮ್ಮೂಢಚಿತ್ತನಾದ ಜಾರ್ಜ

ಕಡೆ ದಿಟ್ಟ ಬೊಂಬೆಯಂತೆ ನಿಂತುಬಿಟ್ಟ. ಕ್ಷಣಕಾಲದ ಆ ಪರವಶತೆ ಕಳೆಯು ತ್ತಿದ್ದ ಹಾಗೇ, ಇದ್ದಕ್ಕಿದ್ದ ಹಾಗೇ ಅವನ ಮೈಯಲ್ಲಿ ಬಿರುಗಾಳಿ ಬೀಸಿದಂತಾಗಿ, ತಾನೇನು ಮಾಡುತ್ತಿರುವುನೆಂದೂ ಯೋಚಿಸದೆ ತನ್ನ ಚರಣ ತಲದಲ್ಲಿ ಕುಳಿತ ಮೆಹರ್‌ಬಾನುವನ್ನು ಮೇಲೆತ್ತಿ, ಅವಳನ್ನು ಬಿಗಿದಪ್ಪಿ ಕೇಳಿದ ಜಾರ್ಜ —

"ನನಗಾಗಿ ...ನೀವು ಬೇಡುವಷ್ಟು....ಭಾಗ್ಯವಂತನೇ ನಾನು....?"

ಅವನ ಪ್ರಶ್ನೆಗೆ ಏನೊಂದೂ ಉತ್ತರ ಕೊಡದೆ ಮೆಹರ್‌ಬಾನು ಕಂಬನಿ ತುಂಬಿದ ಕಣ್ಣುಗಳಿಂದ ಅವನ ಮುಖವನ್ನು ನೋಡುತ್ತಲೇ, ತನ್ನ ತೋಳು ಗಳಿಂದ ಅವನ ದೇಹವನ್ನು ತನ್ನ ಮೈಗೆ ಬಿಗಿದುಕೊಂಡು, ಬಳಿಕ ಹೇಳಿದಳು-

"ನೀವೇನೊ ಭಾಗ್ಯವಂತರೇ........ಆದರೆ ನಾನು ಭಾಗ್ಯವಂತಳೋ ಅಲ್ಲವೋ ಎಂಬುದೇ ನನಗಿರುವ ಸಂಶಯ....?"

"ಏಕೆ ?"

"ಆ ಪ್ರಶ್ನೆಗೆ ಉತ್ತರ ಕೊಡಬೇಕಾದವರು ನೀವು...."

"ಅಂದರೆ...."

"ನನ್ನವರಾಗಿ ನೀವು ನಿಂತರೆ ಆಗ ನಾನು ಭಾಗ್ಯವಂತೆ....ಇಲ್ಲವಾದರೆ ಅದೃಷ್ಟಹೀನೆ."

"ನಾನು....ನಾನು.... ನಿನ್ನವನಾಗಬೇಕೆ ಮೆಹರ್ ?"

"ಬೇಡುವುದು ನನ್ನ ಭಾಗ್ಯ. ನೀಡುವುದು ನಿಮ್ಮ ಕೃಪೆ...."

ಮೆಹರ್‌ಬಾನು ಆ ಮಾತನ್ನು ಆಡುತ್ತಿದ್ದ ಹಾಗೇ, ಜಾರ್ಜ, ಅವಳು ಆ ಮಾತನ್ನು ಮುಗಿಸುವುದಕ್ಕೂ ಅವಕಾಶ ಕೊಡದೆ, ಅವಳ ತುಟಿಗಳನ್ನು ಚುಂಬಿಸಿ ಹೇಳಿದ....

"ಮೆಹರ್-ನಾನಿಂದು ಭಾಗ್ಯವಂತ."

ಪರಸ್ಪರ ತುಟಿಸೋಂಕಿನಿಂದ ಅವರಿಬ್ಬರಿಗೂ ವಿಸ್ಮೃತಿಯಾದಂತಾಗಿ ಅಷ್ಟುಹೊತ್ತು ಒಬ್ಬರೊಬ್ಬರ ತೋಳ ತೆಕ್ಕೆಯಲ್ಲಿ ಮೈಮರೆತು ನಿಂತಿದ್ದರು. ಹತ್ತಾರು ಚುಂಬನಗಳ ಬಳಿಕ, ಆ ಆವೇಗ ಕೊಂಚ ಇಳಿದು, ಮೈ ತಿಳಿದು ಮೆಹರ್‌ಬಾನುವಿನ ಕೆದರಿದ ಕುರುಳನ್ನು ತಿದ್ದಿ, ಅವಳ ನುಣ್ಣದಪನ್ನು ಮೃದು ವಾಗಿ ನೇವರಿಸುತ್ತಾ ಕನಸಿನಲ್ಲಾಡುವವನಂತೆ ಹೇಳಿದ ಜಾರ್ಜ —

"ಮೆಹರ್....ಇದು ನಾನು ಕನಸು ಮನಸ್ಸಿನಲ್ಲೂ ಊಹಿಸದ ಭಾಗ್ಯ. ಹೇಳು ನಲ್ಲೆ-ಈ ಕೃಪೆಗೆ ಏನು ಮಾಡಿ ನಾನು ಅರ್ಹನಾಗಬೇಕು ?"

" ಕೇಳಿದರೆ, ಆ ಬೇಡಿಕೆಯನ್ನು ಈಡೇರಿಸುತ್ತೀರಾ ?"

" ನಿನಗಾಗಿ ಏನುಬೇಕಾದರೂ ಮಾಡಲು ಸಿದ್ಧನಾಗಿದ್ದೇನೆ. ಕೇಳು–"

" ಹಾಗಿದ್ದರೆ....ಹಾಗಿದ್ದರೆ....ಯುದ್ಧಕ್ಕೆ ಹೋಗಬೇಡಿ...."

—ಕಕ್ಕುಲತೆ ತುಂಬಿದ ಧ್ವನಿಯಲ್ಲಿ ಬೇಡಿದಳು ಮೆಹರ್‌ಬಾನು.

ಅವಳ ಪ್ರಶ್ನೆಗೆ ಜರ್ಾ ಏನೂ ಉತ್ತರ ಕೊಡದೆ, ಅವಳೊಂದಿಗೆ ಹತ್ತಿರದಲ್ಲಿದ್ದ ಆಸನದ ಬಳಿ ಹೋಗಿ ಕುಳಿತು, ಅವಳನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು, ಅವಳ ಮುಖವನ್ನು ತನ್ನ ಎದೆಗೆ ಒತ್ತಿಕೊಂಡು, ಅವಳ ತುಂಬುದೋಳನ್ನು ನಯವಾಗಿ ನೇವರಿಸುತ್ತಾ ಹೇಳಿದ—

" ನನ್ನ ಬಾಳಿನ ಘೋರ ದುರಂತ ಯಾವುದು ಗೊತ್ತೆ ಮೆಹರ್ ?"

" ಯಾವುದು ?"

" ಯಾರನ್ನು ನಾನು, ಈ ಜಗತ್ತಿನಲ್ಲಿ ಎಲ್ಲಕ್ಕಿಂತ ಮಿಗಿಲಾಗಿ ಪ್ರೀತಿಸುತ್ತೇನೋ, ಅವರಿಗಾಗಿ ಏನನ್ನೂ ಮಾಡಲಾಗದಿರುವುದು ನನ್ನ ಜೀವನದ ಮಹಾ ದೌರ್ಭಾಗ್ಯ."

" ಅಂದರೆ...."

" ನನ್ನನ್ನು ಪ್ರೀತಿಸುವವರಾರೂ ಸುಖಿಗಳಾಗುವುದಿಲ್ಲ, ಮೆಹರ್."

—ಗಭೀರ ವಿಷಣ್ಣತೆ ತುಂಬಿ ತುಳುಕುವ ಧ್ವನಿಯಲ್ಲಿ ಹೇಳಿದ ಜರ್ಾ. ಮೆಹರ್‌ಬಾನುವಿಗೆ ಅವನ ಮಾತಿನ ಸಂಪೂರ್ಣ ಅರ್ಥ ತಿಳಿಯದಿದ್ದರೂ, ಅವಳ ಎದೆಯ ಮೇಲೆ ಮಂಜುಗಡ್ಡೆಯನ್ನಿಟ್ಟಂತಾಗಿ, ಅಕಾರಣವಾಗಿ ತನ್ನೆದೆಯಲ್ಲಿ ಮೂಡಿದ ಭೀತಿಯನ್ನು ನಿವಾರಿಸಿಕೊಳ್ಳಲು ಯತ್ನಿಸುವಂತೆ, ಜರ್ಾನ ಎದೆಯನ್ನು ಬಿಗಿದಪ್ಪಿ—

" ಅದೇಕೆ ಹಾಗೆ ಹೇಳುತ್ತೀರಾ ?"

—ಎಂದು ಕೇಳಿದಳು.

" ನೀನು ಎಂಥವನನ್ನು ಪ್ರೀತಿಸುತ್ತೀಯಾ ಎಂಬುದು ನಿನಗೆ ತಿಳಿಯದು ಮೆಹರ್ ; ನಿನಗೆ ಸಂಪೂರ್ಣ ಅಪರಿಚಿತ."

" ಇರಬಹುದು. ಪ್ರೇಮಕ್ಕೆ ಕಾರಣ ಪರಿಚಯವಲ್ಲ."

" ಅದನ್ನು ನಾನು ಬಲ್ಲೆ. ಅಗೋಚರ ಕಾರಣಗಳಿಗಾಗಿ ಅಪರಿಚಯಸ್ಥರೀರ್ವರಲ್ಲಿ ಮೂಡುವ ಪ್ರೇಮ, ಪರಿಚಯದ ದೋಹನದಿಂದ ಫಲಿಸುತ್ತದೆ. ಆದರೆ ನಮ್ಮೀರ್ವರಲ್ಲಿ ಆ ಬಗೆಯ ಪರಿಚಯಕ್ಕೆ ಅವಕಾಶ ಒದಗಿಲ್ಲ.

ಮುಂದೆ—ಭಗವಂತನ ದಯವಿದ್ದರೆ, ನಮ್ಮೀರ್ವರ ನಡುವೆ ಪರಿಚಯ ಬೆಳೆಯುಬಹುದು. ಆದರೆ ಸದ್ಯಕ್ಕೆ ಆ ಅವಕಾಶವಿಲ್ಲ."

"ಏಕೆ ?"

"ಈ ಯುದ್ಧ ಅದಕ್ಕೆ ಅಡ್ಡಿಯಾಗಿ ಬಂದಿದೆ. ನೀನು ನನ್ನನ್ನು ಎಷ್ಟರಮಟ್ಟಿಗೆ ಪ್ರೀತಿಸುತ್ತೀಯೋ ನಾನರಿಯೆ, ಮೆಹರ್. ಆದರೆ ರಾಜಾ ಸಾಹೇಬರ ಅರಮನೆಯಲ್ಲಿ ನಿನ್ನನ್ನು ಕಂಡ ಗಳಿಗೆಯಿಂದಲೂ ನನ್ನ ಹೃದಯ ನಿನ್ನ ಚರಣಕಮಲಕ್ಕರ್ಪಿತವಾಗಿದೆ. ಆದರೆ ಒಮ್ಮೆ, ನನ್ನ ಹುಟ್ಟಿದೂರಿನಲ್ಲಿ. ನಿನ್ನಂಥವಳೊಬ್ಬಳನ್ನು ನಾನು ಪ್ರೀತಿಸಿ ಬರಿಗೈಯಾದ ನನಗೆ, ನಿನ್ನಲ್ಲಿ ಪ್ರಣಯ ಭಿಕ್ಷೆ ಬೇಡುವ ಧೈರ್ಯವಿರಲಿಲ್ಲ. ಇಂದು ತಾನಾಗಿಯೇ ಒಲಿದು ಬರುವ ಭಗವತ್-ಕೃಪೆಯಂತೆ, ನೀನು ಬಂದು ನನ್ನ ಬಾಳನ್ನು ಪುನೀತ ಗೊಳಿಸಿದೀಯ; ನನ್ನ ಜೀವನದ ಅಂಧಕಾರಾವೃತ ಗೃಹದಲ್ಲಿ ದಿವ್ಯ ಜ್ಯೋತಿಯನ್ನು ಹೊತ್ತಿಸಿದೀಯ; ಕೇವಲ ಮರಣವನ್ನು ಬಾಸ್ಸೈಸುತ್ತಿದ್ದವ ನಲ್ಲಿ, ಬದುಕಿನ ಬಯಕೆಯನ್ನು, ಬಾಳ ಜೂಜಿನಲ್ಲಿ ಗೆಲ್ಲಲೇ ಬೇಕೆಂಬ ಹುರು ಪನ್ನು ಹುಟ್ಟಿಸಿದೀಯ. ನೀನಿಂದು ನನಗೆ ನೀಡಿರುವುದು ಕೇವಲ ಪ್ರೇಮ ದಾನವಲ್ಲ, ಮೆಹರ್, ಜೀವದಾನ. ಈ ಅಮೋಘ ಕಾಣಿಕೆಗೆ ತಕ್ಕ ಪ್ರತಿ ಫಲ ಕೊಡುವ ಯೋಗ್ಯತೆ ಈ ಗಳಿಗೆಯಲ್ಲಿ ನನ್ನಲಿಲ್ಲ. ಸಂತೋಜಿ ಘೋರ್ಪಡೆ ಯನ್ನು ಕೊಂದು, ಅವನ ಬಿಸಿನೆತ್ತರಿನಿಂದ, ನನ್ನ ಹೃದಯದಲ್ಲಿರುವ ಪ್ರತೀಕಾರ ತೃಷೆಯ ಭೂತವನ್ನು ಉಚ್ಚಾಟನೆ ಮಾಡಿದಲ್ಲದೆ, ನನ್ನ ಹೃದಯ ನಿನ್ನ ಪವಿತ್ರ ಮೂರ್ತಿಯ ವಾಸಕ್ಕೆ ಉಚಿತ ಗೃಹವಾಗಲಾರದು ?"

"ಆ ಸಂತೋಜಿಯ ಮೇಲೆ ನಿಮಗೇಕೆ ಇಷ್ಟು ಭಯಂಕರ ದ್ವೇಷ ? ........"

"ಅದಾವುದನ್ನೂ ನೀನಿಂದು ಕೇಳಬೇಡ ಮೆಹರ್. ಇಂದೇ ನಿನ್ನ ಹೃದಯದ ಮೇಲೆ ನನ್ನ ದುರಂತ ಜೀವನದ ಹೊರೆಯನ್ನು ಹೊರಿಸಲು ನನಗೆ ಇಷ್ಟವಿಲ್ಲ. ಗೆದ್ದುಬಂದು ನಿನ್ನನ್ನು ಸ್ವೀಕರಿಸುವ ಮುನ್ನ ಯಾವು ದನ್ನೂ ನಿನ್ನ ಮುಂದೆ ಮುಚ್ಚಿಡುವುದಿಲ್ಲ......."

"ಯುದ್ಧದಲ್ಲಿ ಜಯಾಪಜಯಗಳು ಯಾರಿಗೂ ನಿಶ್ಚಿತವಲ್ಲವಲ್ಲ....."

"ಅಲ್ಲ...."

"ಹಾಗಿರುವಾಗ ಈ ಜೂಜಿಗೆ ನುಗ್ಗುವುದೇಕೆ? ನನಗಾಗಿ ಅದನ್ನು ಮರೆತುಬಿಡಲಾರಿರಾ ?"

"ನನ್ನ ವಾದವನ್ನು ನೀನು ನಂಬದೇ ಹೋಗಬಹುದು, ಮೆಹರ್...."

"ಚಿಂತೆಯಿಲ್ಲ ಹೇಳಿ."

"ನಾನು ಮಾಡಿದ ಪ್ರತಿಜ್ಞೆ ಯಾರೊಬ್ಬರ ಒತ್ತಾಯದಿಂದಲೂ ನಾನು ಮಾಡಿದುದಲ್ಲ. ಯಾರೊಬ್ಬರ ಉದ್ಧಾರಕ್ಕಾಗಿಯೂ ಮಾಡಿದುದಲ್ಲ. ನನಗಾಗಿ ನಾನೇ ಮಾಡಿಕೊಂಡ ಶಪಥ? ಆ ಶಪಥವನ್ನು ನಾನು ಇಂದು ನಿನ್ನ ಕಾರಣಕ್ಕಾಗಿ ಮರೆಯಬಹುದಾದರೆ, ಆ ದುರ್ಬಲ ಚಿತ್ತ ಇಂದು ನಿನಗಿತ್ತ ವಚನವನ್ನು ಮತ್ತೊಬ್ಬರ ಕಾರಣಕ್ಕಾಗಿ ಮುರಿಯಲು ಸಿದ್ಧವಾಗಬಹುದು. ಆದುದರಿಂದ ಯಾವುದೇ ಕಾರಣಕ್ಕಾಗಿಯೂ ನನ್ನ ಚಿತ್ತಕ್ಕೆ ಆ ದುರ್ಬಲತೆಯ ಪಾಠ ಕಲಿಸಲು ನಾನು ಸಿದ್ಧನಾಗಿಲ್ಲ. ಇಂದು ನೀನು ನನ್ನನ್ನು ಪ್ರೀತಿಸುತ್ತಿದ್ದೀಯ, ಮೆಹರ್. ಆದರೆ ಎರಡು ಜೀವಗಳನ್ನು ಬೆಸೆಯಲು ಬರೀ ಪ್ರೇಮವೊಂದೇ ಸಾಲದು........"

"ಮತ್ತೇನು ಬೇಕು ?"

"ಅದಕ್ಕಿಂತಲೂ ಮಿಗಿಲಾಗಿ, ಪರಸ್ಪರ ನಂಬಿಕೆ, ಗೌರವ ಬೇಕು. ವಚನ ಶುದ್ಧಿಯಿಲ್ಲದ ಮನುಷ್ಯ ಅದನ್ನೆಂದಿಗೂ ಪಡೆಯಲಾರ. ಆದುದರಿಂದ ನಿನ್ನನ್ನು ಬೇಡಿಕೊಳ್ಳುತ್ತೇನೆ, ಮೆಹರ್. ಇಂದು ನನ್ನನ್ನು ನನ್ನ ಪ್ರತಿಜ್ಞಾಪಥದಿಂದ ಹಿಂದಿರುಗಿಸಲು ಯತ್ನಿಸಬೇಡ; ಪೂರ್ಣಪ್ರತಿಜ್ಞನಾಗಿ, ವಿಜಯಿಯಾಗಿ ಬಾ ಎಂದು ಹೃತ್ಪೂರ್ವಕವಾಗಿ ಹಾರೈಸು. ನಿನ್ನ ಹಾರೈಕೆ ನನ್ನ ಪಾಲಿಗೆ ದೈವಾನುಗ್ರಹ.

"ನನ್ನ ಹಾರೈಕೆಗೆ ಅಷ್ಟು ಶಕ್ತಿಯಿದೆಯೇ ?"

—ಜಾರ್ಜನನ್ನು ಅವನ ನಿಶ್ಚಯದಿಂದ ಹಿಂತಿರುಗಿಸಲಾಗದೆ ಕಂಬನಿದುಂಬಿ ಕೇಳಿದಳು ಮೆಹರ್‌ಬಾನು.

"ಇದೆ. ದೈವೀಶಕ್ತಿ, ಈ ಧರೆಯಲ್ಲಿ ಪ್ರಕಟವಾಗುವುದೇ ಶುದ್ಧ ಪ್ರೇಮದಲ್ಲಿ, ಪ್ರೇಮವೇ ಭಗವಂತನ ಭೂನಿವಾಸ. ನೀನಿಂದು ನನ್ನ ಪಾಲಿಗೆ ಬರೀ ಪ್ರಣಯಿನಿಯಲ್ಲ ಮೆಹರ್. ದೈವೀಕೃಪೆಯ ಸ್ತ್ರೀರೂಪ. ಎಂತಲೇ ನಿನ್ನನ್ನು ಪ್ರಾರ್ಥಿಸುತ್ತೇನೆ: ನನ್ನನ್ನು ಹರಸಿ ಬೀಳ್ಕೊಡು ಮೆಹರ್."

ಹೃದಯುದಾಳದಿಂದ ಮೂಡಿಬಂದ ಜರ್ಾನ ಬೇಡಿಕೆಯನ್ನು ಹೇಗೆ ನಿರಾಕರಿಸಬೇಕೆಂದು ತಿಳಿಯದೆ ಮೆಹರ್ ಬಾನು ನಿರುತ್ತರಳಾದಳು. ಪ್ರಣಯ ಸಲ್ಲಾಪವನ್ನಾಡಬಯಸುವ ಬಾಯಿಂದ ಸಮರದೀಕ್ಷೆಯನ್ನು ನೀಡಲಾರದೆ, ಅವಳ ಹೃದಯದ ಯಾತನೆ ಅವಳ ನೀಲ ನೇತ್ರಗಳಿಂದ, ಅವಿರತ ಜಲಧಾರೆಯಾಗಿ ಹರಿಯಿತು. ಕಂಬನಿಯಿಂದ ಆತನ ವಕ್ಷಸ್ಥಲವನ್ನು ತೋಯಿಸುತ್ತಲೇ ಹೇಳಿದಳು—

"ಗೆದ್ದು ಬಾ ಪ್ರಿಯತಮ, ನಿನ್ನ ಮೆಹರಳಿಗಾಗಿ ಗೆದ್ದು ಬಾ."

ಅವಳ ನಾಲಿಗೆ ಆ ವಿಜಯಾಕಾಂಕ್ಷೆಯನ್ನು ನುಡಿಯಿತು.

ಆದರೆ ಅವಳ ಹೃದಯ, ತನ್ನ ಪ್ರಣಯ ಪಥದಲ್ಲಿ ತನ್ನ ಪಿಶಾಚ ಛಾಯೆಯನ್ನು ಕೆಡಹಿದ ಸಮರವನ್ನು ಶಪಿಸುತ್ತಿತ್ತು—

"ಹಾಳಾಗಲಿ, ಈ ಯುದ್ಧಮಾರಿ ಹಾಳಾಗಲಿ; ದೇವಾ, ನಿನ್ನ ಸೃಷ್ಟಿಯ ಸೌಂದರ್ಯವೆಲ್ಲವನ್ನೂ ವಿನಾಶಗೊಳಿಸುವ ಸಮರದ ಶನಿಮುಷ್ಟಿಯಿಂದ ಈ ಜಗತ್ತನ್ನು ಮುಕ್ತಗೊಳಿಸು."

೮

ಜ್ಯಾರ್ಡ್ಟ್ನುವೋರೋನ ತೋಳತೆಕ್ಕೆಯಲ್ಲೊರಗಿದ ಮೆಹರ್ ಬಾನುವಿನ ಹೃದಯದಲ್ಲಿ ಮೂಡಿದ ಯುದ್ಧವಿರೋಧೀ ಚಿಂತೆಯೇ ಭರಮಣ್ಣನಾಯಕರ ಹೃದಯವನ್ನೂ ಕವಿದಿದ್ದಿತು.

"ರಾಜ್ಯವಾಳುವವರು, ಒಂದು ರಾಜ್ಯದ ರಕ್ಷಣೆಯ ಹೊರೆ ಹೊತ್ತವರು, ಯುದ್ಧಕ್ಕೆ – ಅದೂ ತಾನಾಗಿಯೇ, ಅನಿವಾರ್ಯವಾಗಿ ಒದಗಿ ಬರುವ ಯುದ್ಧ ಪ್ರಸಂಗಕ್ಕೆ ತಲೆತಪ್ಪಿಸಿಕೊಂಡು ಬದುಕುವುದು ಸಾಧ್ಯವೇ? ಎಲ್ಲ ಸಂದರ್ಭಗಳಂತೆಯೇ, ಈ ಸಂದರ್ಭದಲ್ಲಿಯೂ 'ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ' ಎನ್ನುವ ಮಾತೇ ಸರಿ"

—ಎಂದುಕೊಂಡು ಬಗೆಬಗೆಯಲ್ಲಿ, ತಮ್ಮ ಚಿಂತಾಗ್ರಸ್ತವಾದ ಚಿತ್ತಕ್ಕೆ ಸಮಾಧಾನ ಹೇಳಿಕೊಳ್ಳಲು ಯತ್ನಿಸಿದರೂ, ಚಿತ್ರದುರ್ಗದ ಸೇನೆ ಅಣಜಿ

ಕೋಟೆಯ ಕದನದಲ್ಲಿ ಗೆಲವು ಪಡೆದು ಹಿಂದಿರುಗಿದಂದು, ಅವರ ಪರಮ ಗುರುಗಳಾದ ಶ್ರೀ ಮುರುಘರಾಜೇಂದ್ರ ಸ್ವಾಮಿಗಳು—

"ನಿನ್ನ ಕಣ್ಣು, ನಿನ್ನ ಕಣ್ಣಮುಂದೆ ನಡೆಯುತ್ತಿರುವ ಗೆಲುವಿನ ನರ್ತನವನ್ನು ಮಾತ್ರ ಕಾಣುತ್ತಿದೆ ಭರಮಣ್ಣ. ಆದರೆ ನನ್ನ ಕಣ್ಣುಗಳು ಕಾಣುತ್ತಿರುವುದೇ ಬೇರೆ – ಈ ಮೆರವಣಿಗೆಯನ್ನು ಹಿಂಬಾಲಿಸಿ ಬರುತ್ತಿರುವ ಕಂಕಾಳಿಗಳ ಕರಾಳ ಛಾಯೆ ನನಗೆ ಕಾಣುತ್ತಿದೆ."

—ಎಂದು ಹೇಳಿದ ಮಾತು, ಮತ್ತೆ ಮತ್ತೆ ನೆನಪಾಗಿ, ಸೀರ್ಯದವರಿಗೆ ನೆರವು ನೀಡುವ ನೆಪದಿಂದ ಆರಂಭವಾದ ಯುದ್ಧ ತನ್ನ ಮಡಲಿನಲ್ಲಿ ಮತ್ತೆಷ್ಟು ಯುದ್ಧದ ಚಿತ್ರಗಳನ್ನು ಹುದುಗಿಸಿಕೊಂಡಿರುವುದೋ ಎಂಬ ಭೀತಿಯಾವರಿಸಿ, ಮನಸ್ಸಿನ ಉಮ್ಮಳವನ್ನು ಬೇರಾವ ರೀತಿಯಲ್ಲೂ ತೀರಿಸಿಕೊಳ್ಳಲು ದಾರಿಗಾಣದೆ ಗುರುಗಳ ದರ್ಶನಕ್ಕೆ ಹೊರಟರು.

ನಾಯಕರ ಅರಮನೆಗೆ ಬಹು ಸಮೀಪವಾಗಿ, ಸಂಪಿಗೆ ಸಿದ್ಧೇಶ್ವರನ ಭವ್ಯದೇವಾಲಯದ ಇದಿರುಬದಿರು ಬಹು ವಿಶಾಲವಾದ ಬಯಲಿನಲ್ಲಿ, ರಾಜಗುರು ಶ್ರೀಮುರುಘರಾಜೇಂದ್ರಸ್ವಾಮಿಗಳಿಗಾಗಿ, ಅರವತ್ತು ಅಂಕಣಗಳಷ್ಟು ವಿಸ್ತಾರವಾದ ಶುದ್ಧ ಶಿಲಾಭವನ, ಪೂರ್ವಾಭಿಮುಖವಾಗಿ ನಿರ್ಮಿತವಾಗಿತ್ತು. ತುಲಾಭಾರ ಸ್ತಂಭಗಳ ಇದುರಿಗೆ ಶ್ರೀಮಠದ ಹೆಬ್ಬಾಗಿಲು. ಹೆಬ್ಬಾಗಿಲಿನ ಬಯಲಿನಲ್ಲಿ ಬಂದರೆ ಬಲಪಾರ್ಶ್ವದಲ್ಲಿ ಸಂಪಿಗೆ ಸಿದ್ಧೇಶ್ವರನ ಆಲಯ, ಎಡಬದಿಯಲ್ಲಿ ಹಿಡಂಬೇಶ್ವರನ ಮಂದಿರ, ಅದರಾಚೆ ಬಾವುಟದ ಬತೇರಿಯಿದ್ದ ಗಿರಿಯ ಪಾರ್ಶ್ವದಲ್ಲಿ ಉನ್ನತ ಭೂಮಿಯ ಮೇಲೆ ರಚಿತವಾದ ಏಕನಾಥೇಶ್ವರಿಯ ದೇವಾಲಯವನ್ನು ನೋಡಬಹುದಾಗಿತ್ತು.

ಸಂಜೆಯ ಇಳಿಹೊತ್ತಿನ ಸಮಯದಲ್ಲಿ ಶ್ರೀಗುರುಗಳ ದರ್ಶನಕ್ಕೆಂದು, ಸಮೀಪದ ಅರಮನೆಯಿಂದ ರಾಜವೈಭವದ ಆಡಂಬರಗಳನ್ನೆಲ್ಲಾ ತೊರೆದು, ಅಲ್ಪ ಪರಿವಾರದೊಂದಿಗೆ, ಕಾಲ ನಡಗೆಯಲ್ಲೇ ಮಠಕ್ಕೆ ಬಂದ ನಾಯಕರು, ಮಠದ ಮುಂದಲ ಬಯಲಿನಲ್ಲಿಯೇ ನಿಂತು ಸುತ್ತಲೂ ಕಾಣುತ್ತಿದ್ದ ದೇವಾಲಯಗಳ ದೇವತೆಗಳಿಗೆ ವಂದಿಸಿ, ಹೆಬ್ಬಾಗಿಲನ್ನು ಸೇರಿದರು. ನಾಯಕರು ಹೆಬ್ಬಾಗಿಲ ಬಳಿಗೆ ಬರುವ ವೇಳೆಗೆ ಸರಿಯಾಗಿ, ಪೂರ್ವಭಾವಿಯಾಗೇ ನಾಯ

ಕರ ಆಗಮನವಾರ್ತೆಯನ್ನು ಅರಿತಿದ್ದ ಗುರುಗಳ ಮರಿಗಳು ಮಹಾದ್ವಾರದ ಬಳಿಯಲ್ಲೇ ನಾಯಕರನ್ನು ಎದುರುಗೊಂಡರು.

ಅವರಿಂದ ಗುರುಗಳ ಸಾಯಂ ಶಿವಪೂಜೆಯ ಕಾರ್ಯ ಮುಗಿದಿದೆ ಯೆಂದು ಅರಿತುಕೊಂಡು, ನಾಯಕರು ತಮ್ಮೊಂದಿಗೆ ಬಂದವರನ್ನು ಮಠದ ಹೊರಗೆ ಬಿಟ್ಟು, ಮರಿಗಳ ಹಿಂದೆ ಮಠವನ್ನು ಪ್ರವೇಶಿಸಿ, ತಮ್ಮ ಬರುವನ್ನು ನಿರೀಕ್ಷಿಸುತ್ತಾ ಕುಳಿತಿದ್ದ ಸ್ವಾಮಿಗಳ ಪಾದಕ್ಕೆ ದೀರ್ಘದಂಡ ಪ್ರಣಾಮಮಾಡಿ, ಅವರ ಹರಕೆಯನ್ನು ಪಡೆದು, ಅಷ್ಟು ದೂರದಲ್ಲಿ ಸಮುಚಿತವಾದ ಆಸನದಲ್ಲಿ ಕುಳಿತರು.

ಸ್ವಾಮಿಗಳು ನಾಯಕರ ಕುಶಲಪ್ರಶ್ನೆ ಮಾಡಿದ ಬಳಿಕ ಅಂದಿನ ಬರವಿಗೆ ಕಾರಣವನ್ನು ವಿಚಾರಿಸಿದರು.

ಅವರ ಪ್ರಶ್ನೆಗೆ ಉತ್ತರವಾಗಿ ನಾಯಕರು ಜುಲ್‌ಫಿಕಾರ್ ಖಾನನ ನಿಯೋಗದಿಂದ ಆರಂಭವಾಗಿ, ಚಿತ್ರದುರ್ಗದವರು ಸೀರ್ಯದವರ ನೆರವಿಗೆ ಸೇನೆ ಕಳಿಸುವ ನಿರ್ಧಾರದಲ್ಲಿ ಮುಕ್ತಾಯವಾದ ರಾಜಕಾರ್ಯವನ್ನೆಲ್ಲಾ ವಿವರಿಸಿ ಹೇಳಿ—

"ಈ ವಿಷಯದಲ್ಲಿ ಶ್ರೀ ಚರಣಗಳ ಅಪ್ಪಣೆ, ಆಶೀರ್ವಾದ ಪಡೆದು ಕೊಂಡು ಹೋಗಬೇಕೆಂದು ಬಂದೆ."

ಭರಮಣ್ಣನಾಯಕ ಹೇಳಿದುದೆಲ್ಲವನ್ನೂ ಸಾವಧಾನವಾಗಿ ಕೇಳಿ, ಅವನ ಮಾತು ಮುಗಿದ ಬಳಿಕ —

"ವಾಡಿಕೆಯಲ್ಲಿ ಗಾದೆಯ ಮಾತೊಂದಿದೆ ಭರಮಣ್ಣ, ನಿನ್ನ ಮಾತು ಕೇಳಿ ನನಗೆ ಅದು ನೆನಪಾಗುತ್ತದೆ."

—ಎಂದರು ಮುಗುಳುನಗೆ ನಕ್ಕು.

"ಯಾವ ಮಾತು ಗುರುದೇವಾ?"

"ಆದ ಕೆಲಸಕ್ಕೆ ಅತ್ತೆಯ ನೆರವು ಕೇಳಿದಂತೆ ಎಂತ; ನಿನ್ನ ಮಾತೂ ಹಾಗೇ ಇದೆ."

"ಏಕೆ?"

"ಅಷ್ಟಲ್ಲದೆ ಮತ್ತೇನು? ಒಂದು ವಿಚಾರದಲ್ಲಿ, ಅರಸರು, ಸಚಿವರು, ದಳವಾಯಿಗಳು ಎಲ್ಲರೂ ಒಂದು ತೀರ್ಮಾನಕ್ಕೆ ಬಂದ ಬಳಿಕ ನನ್ನನ್ನು ಕೇಳು ವುದು ಏನು ಉಳಿಯಿತು? ನಮಗೆ ತಾನೇ ಹೇಳಲು ಏನು ಉಳಿದಿದೆ?

'ಆಯಿತು ಶಿಷಸಿಚ್ಛೆ' ಅನ್ನುವುದಷ್ಟೇ ತಾನೇ ನನಗೆ ಉಳಿದಿರುವುದು."

"ಉಹೂ....ಹಾಗಲ್ಲ."

"ಮತ್ತಿನ್ನೇನು?"

"ನಾನು ಪಟ್ಟಕ್ಕೆ ಕುಳಿತ ದಿನವೇ ಹೇಳಿದ್ದೇನೆ, ನನ್ನದು ಕುಳಿತ ಪಟ್ಟ ಮಾತ್ರ, ಶಾಶ್ವತಾಧಿಕಾರ ತಮ್ಮದು ಎಂದು. ಯಾವುದೇ ವಿಷಯದಲ್ಲೂ, ಅಂತಿಮ ತೀರ್ಮಾನ ಮಾಡುವ ಪರಮಾಧಿಕಾರ ಗುರುಗಳದು. ಹೆಜ್ಜೆ ಗೊಮ್ಮೆ ಎಡಹುವ ಹುಲುಬುದ್ಧಿಯ ನನ್ನದೇ ಅರಸುತನ ಎಂದುಕೊಂಡರೆ, ಈ ರಾಜ್ಯ ಉಳಿದೀತೆ ಗುರುದೇವಾ? ತಾವು ತ್ರಿಕಾಲ ಜ್ಞಾನಿಗಳು; ತಮ್ಮ ಮಾತೇ ನಮಗೆ ಮಾರ್ಗ. ಆದ್ದರಿಂದ ತಮ್ಮ ಅಭಿಪ್ರಾಯವೇನೋ ಅಪ್ಪಣೆ ಕೊಡಿಸಬೇಕು. 'ಇದು ಒಳ್ಳೆಯದು, ಮಾಡು' ಎಂದರೆ ಆ ಕೆಲಸ ಮಾಡು ತ್ತೇನೆ ಇಲ್ಲವಾದರೆ ಅಲ್ಲಿಗೇ ಕೈ ಬಿಡುತ್ತೇನೆ."

—ಎಂದು ಬೇಡಿದ ಭರಮಣ್ಣನಾಯಕ.

"ಈ ಮಾತನಾಡುವಾಗಲೂ ನೀನು ತಪ್ಪು ಮಾಡುತ್ತಿದೀಯ ಭರಮಣ್ಣ."

"ಏಕೆ ಗುರುದೇವಾ?"

"ಹೆಜ್ಜೆ ಹೆಜ್ಜೆಗೂ ಪರರ ಅಭಿಪ್ರಾಯಕ್ಕಾಗಿ ಕೈ ಚಾಚುವಾತ, ಒಮ್ಮೆ ಮಾಡಿದ ತೀರ್ಮಾನವನ್ನು ಇತರರ ಮಾತಿನಂತೆ ಬದಲಿಸುವಾತ, ಉತ್ತಮ ಅರಸನಾಗುವುದಿಲ್ಲ. ಅಂಥವನ ಬಗ್ಗೆ ಜನರಿಗೆ ಬಹುಕಾಲ ಗೌರವ ಉಳಿಯು ವುದಿಲ್ಲ. ತೀರ್ಮಾನಕ್ಕೆ ಬರುವ ಮುನ್ನ ಹತ್ತು ಬಾರಿ ಯೋಚಿಸಬೇಕು, ಹಿತೈಷಿಗಳ ಸಲಹೆಗಳನ್ನು ಕೇಳಬೇಕು. ಅದೆಲ್ಲವೂ ಆಗಿ ಒಂದು ತೀರ್ಮಾನಕ್ಕೆ ಬಂದ ಬಳಿಕ, ಶತಾಯುಗತಾಯ ಅದಕ್ಕನುಸಾರವಾಗಿ ನಡೆಯಬೇಕು. ಅದು ಧೀರಪುರುಷನ ಲಕ್ಷಣ. ಅದು ಬಿಟ್ಟು, ಆಡಿದ ಮಾತಿಗೆಲ್ಲಾ ತಲೆಹಾಕುವ ಓತಿಕೇತನ ಹಾಗಿದ್ದರೆ ಅಂಥವನಿಂದ ಏನು ಕೆಲಸವಾಗುತ್ತದೆ?"

"ಗುರುಗಳ ಮಾತಿಗೆ 'ಅಲ್ಲ' ಎನ್ನುವಷ್ಟು ಎದೆಗಾರಿಕೆ ನನಗಿಲ್ಲ. ಆದರೆ ಇಲ್ಲಿ ಒಂದು ವ್ಯತ್ಯಾಸವಿದೆ...."

"ಏನು ವ್ಯತ್ಯಾಸ?"

"ನಾನು ಸಾಮ್ರಾಜ್ಯದ ವಿಷಯದಲ್ಲಿ ಅನಿಶ್ಚಯತೆಯಿಂದ ವರ್ತಿಸುತ್ತಿಲ್ಲ; ಗುರ್ವಾಜ್ಞೆಗೆ ಕೈ ಚಾಚಿದ್ದೇನೆ."

" ಹಾಗೆ ಮಾಡಿ ನೀನು ನಮಗೆ ಉಪಕಾರ ಮಾಡುತ್ತಿಲ್ಲ ; ಇಲ್ಲದ ಅಪಖ್ಯಾತಿಯನ್ನು ನಮ್ಮ ತಲೆಗೆ ಕಟ್ಟುತ್ತಿದ್ದೀಯು."

" ಹೇಗೆ."

" ಮತ್ತಿನ್ನೇನು ? ನಮ್ಮ ಮಾತು ಕೇಳಿ ನೀನು ನಿನ್ನ ನಿರ್ಧಾರ ಬದಲಿಸುತ್ತಾ ಹೋದರೆ, ಅದನ್ನು ಕೇಳಿದ ಜನ ' ದುರ್ಗದ ದೊರೆಗೆ ಸ್ಥಿಮಿತ ಚಿತ್ತವಿಲ್ಲ. ಯಾರೋ ವಿರಕ್ತ, ಸನ್ಯಾಸಿಯಂತೆ, ಬಂದು ಸೇರಿಕೊಂಡು, ಈ ದೊರೆಯನ್ನು ದೊಂಬರ ಕೋತಿಯ ಹಾಗೆ ಕುಣಿಸುತ್ತಾ ತಾನೇ ಅರಸುತನ ನಡೆಸುತ್ತಿದ್ದಾನೆ.' ಎಂದು ಆಡಿಕೊಂಡು, ನಮ್ಮ-ನಿನ್ನ ಇಬ್ಬರ ಹೆಸರೂ ಹೇಳಿಕೊಂಡು ನಗುತ್ತದೆ. ನಮ್ಮನ್ನು ಗೌರವಿಸಬೇಕಾದ ಜನದಲ್ಲಿ ನಗೆ ಪಾಟಲಾದರೆ, ನಿನ್ನ ದೊರೆಪಟ್ಟ ನನ್ನ ಗುರುಪಟ್ಟ ಎರಡಕ್ಕೂ ಬೆಲೆ ಬರುವುದಿಲ್ಲ ಆದುದರಿಂದ ಆ ಯೋಚನೆ ಬಿಟ್ಟುಬಿಡು. ನಮ್ಮ ಹಾಗೇ ' ಆದದ್ದಾಯಿತು, ಆದದ್ದೆಲ್ಲಾ ಒಳಿತಾಗಲಿ ' ಎಂದು ದೇವರಿಗೆ ಒಂದು ನಮಸ್ಕಾರ ಹಾಕು. ಈಗ ಉಳಿದಿರುವುದು ಅಷ್ಟೆ."

—ಸ್ವಾಮಿಗಳು ನಕ್ಕು ಹೇಳಿದರು.

" ಇದು ಸಾಮಾನ್ಯ ವಿಷಯವಾಗಿದಿದ್ದರೆ, ತಾವು ಹೇಳಿದಂತೆಯೇ ಮಾಡುತ್ತಿದ್ದೆ. ಆದರೆ ಇದು ಯುದ್ಧದ ವಿಷಯ...."

" ಕತ್ತಿ ಹಿಡಿದು ಪ್ರಮಾಣ ಮಾಡಿ ರಾಜ್ಯಸ್ವೀಕಾರ ಮಾಡಿದವರಿಗೆ, ಯುದ್ಧವೆನ್ನುವುದೇನು ಅಸಾಮಾನ್ಯ ವಿಷಯವೆ ?"

" ಹಾಗಲ್ಲ ಗುರುದೇವಾ...."

" ಮತ್ತೇನು ?"

" ಅಣಜಿಯ ಯುದ್ಧದ ದಿನದಂದು ನಡೆದ ವಿಜಯೋತ್ಸವದ ಸಮಯದಲ್ಲಿ ತಾವು ನುಡಿದ ಭವಿಷ್ಯತ್ವಾಣಿ ನನ್ನ ನೆನಪಿನಲ್ಲಿ ಸ್ಥಿರವಾಗಿ ನಿಂತು, ಯುದ್ಧವೆಂದರೆ ಹೆದರುವಂತೆ ಮಾಡಿದೆ...."

" ಇರಬಹುದು ಯುದ್ಧಕ್ಕೆ ಹೆದರುವುದು ಒಳ್ಳೆಯದೆ ; ಆದರೆ ಯುದ್ಧ ಬಂದಾಗ ಹೆದರುವುದು ಉಚಿತವಲ್ಲ."

" ಆದರೂ...."

—ಏನೋ ಸಂದೇಹಿಸುತ್ತಾ ಹೇಳಿದರು ನಾಯಕರು.

"ಆದರೂ, ' ಈ ಯುದ್ಧದಲ್ಲಿ ಜಯವಾಗದಿದ್ದರೆ ಈ ಯೋಚನೆ ಬಿಟ್ಟು

ಬಿಡುತ್ತೇನೆ. ಆದ್ದರಿಂದ ಭವಿಷ್ಯ ಹೇಳಿ' ಎಂದು ಕೇಳಬೇಕು ಎಂದಲ್ಲವೇ ನೀನು ಬಂದಿರುವುದು."

—ಇದ್ದಕ್ಕಿದ್ದ ಹಾಗೇ ಕೊಂಚ ಬಿರುಸಾಗಿ ಹೇಳಿದರು ಸ್ವಾಮಿಗಳು —

"ಗುರುಮನೆಯೆಂದರೆ ಜೋಯಿಸರ ಮನೆಯೆಂದುಕೊಂಡೆಯಾ ಭರಮಣ್ಣ ? ಅಥವಾ 'ನೀನು ಬೇಕಾದದ್ದು ಮಾಡು ; ನನ್ನ ಬಲದಿಂದ ನೀನು ಮಾಡಿದುದೆಲ್ಲವನ್ನೂ ಗೆಲ್ಲಿಸಿಕೊಡುತ್ತೇನೆ.' ಎನ್ನುವ ಮಾಂತ್ರಿಕರ ಮಠವೆಂದು ಭಾವಿಸಿದೆಯೋ ಈ ಗುರುಪೀಠವನ್ನು ?"

"ಏಕೋ....ನಮ್ಮಲ್ಲಿ....ಗುರು ಕರುಣೆ ತಪ್ಪಿದಂತಿದೆ."

—ಸ್ವಾಮಿಗಳ ಮಾತನ್ನು ಕೇಳಿ ನಾಯಕರು ಕೊಂಚ ಪೆಚ್ಚಾಗಿ ಹೇಳಿದರು.

"ಅದೂ ತಪ್ಪು."

—ತಟಕ್ಕನೆ ಮೃದುವಾಗಿ ಹೇಳಿದರು ಸ್ವಾಮಿಗಳು.

"ತಪ್ಪಾದರೆ – ನಿಮ್ಮ ಕರುಣೆಯ ಕಂದ ನಾನು – ನನ್ನಲ್ಲಿ ಇಷ್ಟೇಕೆ ನಿಷ್ಠುರ ?"

"ನಿಷ್ಠುರವಲ್ಲ ಭರಮಣ್ಣ, ಇಷ್ಟಾಗಿಯೂ ನಿನ್ನ ಎದೆ ಕಲ್ಲಾಗಲಿಲ್ಲ ವೆಂದು ಪರಿತಾಪ. ನಿನ್ನ ಸ್ಥಿತಿ ನೋಡಿದಾಗ ನನಗೆ, ಎಲ್ಲಿಯೋ ಕೇಳಿದ ನಿನ್ನಂಥವನೇ ಇನ್ನೊಬ್ಬನ ಕಥೆ ನೆನಪಿಗೆ ಬರುತ್ತದೆ...."

"ಯಾರ ಕಥೆ ?"

"ಯಾರದೋ – ಅವನ ಹೆಸರು ನನಗೆ ತಿಳಿಯದು. ಇದು ನಡೆದ ಕಥೆಯೋ ಅಲ್ಲವೋ ಅದೂ ತಿಳಿಯದು. ಆದರೂ ಅವನ ಕಥೆ ನಿನಗೆ ಸರಿ ಹೋಲುತ್ತದೆ. ಆದ್ದರಿಂದ ಹೇಳುತ್ತಿದೇನೆ. ಹಿಂದೊಬ್ಬನಿದ್ದನಂತೆ, ಕಡು ಬಡವ. ಆತನಿಗೆ – ನಿನಗೆ ನಾವು ಸಿಕ್ಕ ಹಾಗೇ – ಒಬ್ಬ ತ್ರಿಕಾಲ ಜ್ಞಾನಿ ಗಳಾದ ಸನ್ಯಾಸಿಗಳು ಸಿಕ್ಕರು. ಅವರು, ಈ ಕಡು ಬಡವ ತಮಗೆ ಮಾಡಿದ ಆದರೋಪಚಾರದಿಂದ ಪ್ರೀತರಾಗಿ —

"ವತ್ಸ, ನಿನಗೇನಾಗಬೇಕು ಹೇಳು ?"

—ಎಂದು ಕೇಳಿದರಂತೆ.

ಅದಕ್ಕೆ ಆ ಬಡವ ಕೇಳಿದನಂತೆ—

"ಗುರುಗಳೇ, ನಿಮಗೆ ಮುಂದೆ ಏನಾಗುತ್ತದೆ ಎಂದು ತಿಳಿಯುವುದೇ?"

“ತಿಳಿಯುತ್ತದೆ.”

“ಹಾಗಾದರೆ ಹೇಳಿ – ಎಂದಾದರೂ, ಈ ಜನ್ಮದಲ್ಲಿ ನನಗೆ ಈ ಬಡತನ ನೀಗುತ್ತದೆಯೇ?”

“ನೀಗುತ್ತದೆ.”

“ನಾನು ಶ್ರೀಮಂತನಾಗುತ್ತೇನೆಯೇ?”

“ಆಗುತ್ತೀಯ.”

“ನನಗೆ ಈಗಾಗಲೇ ಸಾಕಷ್ಟು ವಯಸ್ಸಾಗಿದೆ. ಆದರೂ ನಾನು, ಶ್ರೀಮಂತನಾದರೆ, ನನಗೆ ಯಾರಾದರೂ ಹೆಣ್ಣು ಕೊಡುತ್ತಾರೆಯೇ?”

“ಕೊಡುತ್ತಾರೆ.”

“ಆ ಹೆಣ್ಣು ಸತ್ಕುಲ ಪ್ರಸೂತೆಯೂ, ಉತ್ತಮಗುಣಾನ್ವಿತೆಯೂ, ವಿಶೇಷ ಸೌಂದರ್ಯವತಿಯೂ ಆಗಿರುತ್ತಾಳೆಯೇ?”

“ಆಗಿರುತ್ತಾಳೆ.”

“ಅವಳು ಗಂಡುಮಕ್ಕಳ ತಾಯಾಗಿ ನನ್ನ ವಂಶವನ್ನು ಬೆಳಗಿಸುತ್ತಾಳೆಯೇ?”

“ಬೆಳಗಿಸುತ್ತಾಳೆ.”

“ಅವಳ ಗರ್ಭದಲ್ಲಿ ಜನಿಸುವ ಮಕ್ಕಳಿಂದ ನನ್ನ ವಂಶೋದ್ಧಾರವಾಗಿ, ನನ್ನ ಹೆಸರು ಉಳಿಯುತ್ತದೆಯೇ?”

“ಉಳಿಯುತ್ತದೆ.”

ಸನ್ಯಾಸಿಗಳು, ತನ್ನ ಪ್ರಶ್ನೆಗಳಿಗೆ ಕೊಟ್ಟ ಉತ್ತರವನ್ನು ಕೇಳಿ ಆ ಬಡವನಿಗೆ ಅತ್ಯಂತ ಸಂತೋಷವಾಗಿ ಆ ಸಂತೋಷವಲ್ಲಿ, ಅವರ ಪಾದಗಳನ್ನು ಹಿಡಿದು—

“ಮಹಾಸ್ವಾಮಿ, ನೀವು ನುಡಿದಂತೆ ಆದರೆ, ನಿಮ್ಮ ಪಾದಗಳಂತೆ ಬಂಗಾರದ ಪಾದುಕೆಗಳನ್ನು ಮಾಡಿ, ಅವನ್ನೇ ನನ್ನ ಮನೆ ದೇವರಾಗಿ ಪೂಜಿಸುತ್ತೇನೆ.”

—ಎಂದು ಹೇಳಿದ.

“ಆಯಿತು, ನಾನು ಹೇಳಿದ ಹಾಗೆ ಆದ ಕಾಲಕ್ಕೆ ಹಾಗೇ ಮಾಡುವೆಯಂತೆ”

—ಎಂದು ಹೇಳಿ ಸನ್ಯಾಸಿಗಳು ಅಲ್ಲಿಂದ ಹೊರಟು ಹೋದರು.

ದಿವ್ಯಜ್ಞಾನಿಗಳಾದ ಸನ್ಯಾಸಿಗಳು ಅಷ್ಟು ಹೇಳಿಹೋದ ಬಳಿಕ, ಆ ಬಡವ, ಅವರು ಹೇಳಿದಂತೆ ನಡದೇ ತೀರುವುದೆಂಬ ನಂಬಿಕೆಯಿಂದ, ಅವರು ಹೇಳಿದುದೆಲ್ಲವನ್ನೂ ಕಾಯುತ್ತಾ ಕುಳಿತ; ಕುಳಿತೇ ಕುಳಿತ.

ಹತ್ತು ವರ್ಷವಾಯಿತು. ಇಪ್ಪತ್ತು ವರ್ಷವಾಯಿತು. ಕಡೆಗೆ ಆ ಬಡವ ವೃದ್ಧ ಸಾಯುವ ಸಮಯವೂ ಸನ್ನಿಹಿತವಾಯಿತು.

ಆದರೂ ಆ ಸನ್ಯಾಸಿಗಳು ಹೇಳಿದ ಒಂದು ಮಾತೂ ನಿಜವಾಗಲಿಲ್ಲ.

ಹಾಗಾಗಿ ಆ ಬಡವನಿಗೆ, ತನಗೆ ಸುಳ್ಳು ಭವಿಷ್ಯ ಹೇಳಿ ತನ್ನನ್ನು ಠಕ್ಕಿಸಿ ಹೋದ ಸನ್ಯಾಸಿಗಳ ಬಗ್ಗೆ ವಿಶೇಷ ಸಿಟ್ಟು ಬಂದು—

“ಇರಲಿ, ನಾನು ಸಾಯುವ ಮುನ್ನ, ಆ ಸನ್ಯಾಸಿ ಇನ್ನೊಮ್ಮೆ ನನ್ನ ಕೈಗೆ ಸಿಕಲಿ. ಅವರ ಸುಳ್ಳುತನ ಬಯಲುಮಾಡಿ ಅವರ ಮುಖ ಮುರಿದು, ಇನ್ನೆಂದೆಂದೂ ಸುಳ್ಳು ಭವಿಷ್ಯ ಹೇಳದಂತೆ ಬುದ್ಧಿ ಕಲಿಸುತ್ತೇನೆ”

—ಎಂದು ಹಟ ತೊಟ್ಟ.

ಆ ಹಟದಲ್ಲಿ ಅವನಿಗೆ ಪ್ರತಿಕ್ಷಣವೂ. ಆ ಸನ್ಯಾಸಿಗಳದೇ ಧ್ಯಾನವಾಯಿತು.

ಇನ್ನೇನು ಎರಡು ಮೂರು ದಿನದಲ್ಲಿ ಅವನು ಸಾಯುತ್ತಾನೆ ಎಂಬ ಸಮಯವೂ ಬಂದಿತು.

ಆ ಸಮಯದಲ್ಲಿ ಅವನಿಗೆ ಮತ್ತೆ ಸ್ವಾಮಿಗಳ ದರ್ಶನವಾಯಿತು. ಅವರೇ ಅವನನ್ನು ಹುಡುಕಿಕೊಂಡು ಮನೆಗೆ ಬಂದರು. ತಾನು ಮೇಲಕ್ಕೆ ಏಳಲೂ ಆಗದಿದ್ದಂಥ ಸಮಯದಲ್ಲಿ, ತನ್ನ ಮನೆಬಾಗಿಲಿಗೆ ಬಂದ ಸ್ವಾಮಿಗಳನ್ನು ಕಂಡು ಆ ಬಡವನಿಗೆ ಭಯಂಕರ ಸಿಟ್ಟು ಬಂತು. ಆ ಸಿಟ್ಟಿನಲ್ಲೇ —

“ಲೋ ಠಕ್ಕ ಸನ್ಯಾಸಿ, ಈಗ ಮತ್ತೇಕೆ ನನ್ನ ಮನೆಗೆ ಬಂದೆ?”

—ಎಂದು ಅರಚಿದ; ಆ ಸನ್ಯಾಸಿಗಳನ್ನು ಚೆನ್ನಾಗಿ ಬಯ್ದ.

ಅವನ ಸಿಟ್ಟನ್ನು ಕಂಡ ಸನ್ಯಾಸಿಗಳು, ಅವನ ಬೈಗಳಿಂದ ಉದ್ವಿಗ್ನರಾಗದೆ ಹೇಳಿದರು —

“ನನಗೇನೂ ಬರಬೇಕು ಎಂದಿರಲಿಲ್ಲ. ಆದರೆ ನೀನು ಕರೆದೆ; ಅದಕ್ಕಾಗಿ ನಾನು ಬಂದೆ.”

“ನಾನೇ ನಿನಗೆ ಕರೆದು ಕಹಳೆ ಇಡಿಸಿದೆನಲ್ಲವೇ ಮೋಸಗಾರ ಬೈರಾಗಿ. ಈಗ ಬರುವ ಮೊದಲು ಕೆಲವು ದಿನ ಮುಂಚೆಯೇ ನೀನು ಬಂದಿದ್ದರೆ

ಚೆನ್ನಾಗಿತ್ತು. ನಿನ್ನ ಹಲ್ಲು ಮುರಿದು, ನಾಲಗೆ ಸೀಳಿ, ಮತ್ತೆ ಯಾರಿಗೂ ನನಗೆ ಹೇಳಿದ ಹಾಗೆ ಸುಳ್ಳು ಭವಿಷ್ಯ ಹೇಳದ ಹಾಗೆ ಮಾಡುತ್ತಿದ್ದೆ. ಆಯಿತು – ಈಗ ಉಪಾಯವಿಲ್ಲ. ನಾನು ಹಾಸಿಗೆ ಬಿಟ್ಟು ಮೇಲಕ್ಕೆ ಏಳುವ ಹಾಗೂ ಇಲ್ಲ. ಆದ್ದರಿಂದ ನೀನು ಬದುಕಿದೆ. ನಿನ್ನನ್ನು ನಂಬಿ ನಾನು ಪೂರಾ ಕೆಟ್ಟುಹೋದೆ. ನನ್ನ ಕಥೆ ಮುಗಿದು ಹೋಯಿತು. ಹೋಗಲಿ ಹೇಗೂ ಬಂದಿದ್ದೀಯ. ನನ್ನ ಒಂದು ಪ್ರಶ್ನೆಗೆ ಉತ್ತರ ಕೊಡುತ್ತೀಯಾ ?"

"ಕೊಡುತ್ತೇನೆ – ಕೇಳು. ಅದಕ್ಕಾಗಿಯೇ ನಾನು ಬಂದಿರುವುದು." —ಎಂದರು ಸನ್ಯಾಸಿಗಳು.

"ಅದಕ್ಕಾಗಿಯೇ ಬಂದಿದ್ದೀಯೋ ಸರಿ. ಹಾಗಾದರೆ ಕೇಳು–ನನಗೇಕೆ ಸುಳ್ಳು ಹೇಳಿದೆ ?"

"ನಾನು ಸುಳ್ಳು ಹೇಳಲಿಲ್ಲ."

"ಹಾಗಾದರೆ ಆಗ ನೀನು ಹೇಳಿದುದೆಲ್ಲ ನಿಜವೋ ?"

"ನಿಜ."

"ನಿಜವೇ ? ಮತ್ತೆ ಸುಳ್ಳಾಡುತ್ತೀಯಾ ಮೂರ್ಖ ! ನೀನು ಆಡಿದುದೆಲ್ಲವೂ ನಿಜವಾದರೆ, ನೀನಾಡಿದಂತೆ ಒಂದೂ ಏಕೆ ನಡೆಯಲಿಲ್ಲವೋ — ಅದಕ್ಕೆ ಉತ್ತರ ಬೊಗಳು."

"ನಾನು ಹೇಳಿದ್ದೆಲ್ಲವು ನಿಜವೇ. ಆದರೆ ಅದರಂತೆ ನಡೆಯದಿದ್ದುದು ನಿನ್ನ ಪ್ರಾರಬ್ಧ ಕರ್ಮ."

"ಏಕೆ ?"

"ನಿನಗೆ ಬೇಕಾದ ಎಲ್ಲವನ್ನೂ ನೀನು ಕೇಳಿದೆ. ಆದರೆ ಎಲ್ಲಕ್ಕಿಂತ ಮುಖ್ಯವಾದ ಒಂದು ಮಾತನ್ನು ಕೇಳುವುದನ್ನೇ ಮರೆತುಬಿಟ್ಟೆ."

"ನಾನು ಮರೆತದ್ದು ಏನು ಮಾತು ?"

"ನೀನು ಕೇಳಿದುದೆಲ್ಲವೂ, ನಿನಗೆ ಈ ಜೀವನದಲ್ಲಿ ಏನೇನು ಬೇಕು ಎಂದು ಆಸೆಯಿತ್ತೊ ಆ ಬಯಕೆಗಳು. ಆ ಬಯಕೆಗಳು ಎಲ್ಲರಿಗೂ ಇರುವಂಥವೇ; ಅದನ್ನೇ ನೀನು ಕೇಳಿದೆ. ನೀನು ವ್ಯಕ್ತಪಡಿಸಿದಂಥ ಬಯಕೆಗಳು ಬಹು ಜನರ ಜೀವನದಲ್ಲಿ ಸಫಲವಾಗುವಂಥವು; ಆದುದರಿಂದ ಅವು ನಿನ್ನ ಜೀವನದಲ್ಲೂ ಸಫಲವಾಗುತ್ತವೆ ಎಂದು ನಾನು ಹೇಳಿದೆ. ಆದರೆ ನನ್ನನ್ನು ಇಷ್ಟು ಪ್ರಶ್ನೆ ಕೇಳಿದ ನೀನು ನಿನ್ನ ಆತ್ಮವನ್ನೇ ' ಇವೆಲ್ಲವನ್ನೂ ಸಫಲಗೊಳಿಸಿ

ಕೊಳ್ಳಬಲ್ಲ ಧೀಶಕ್ತಿ ನನ್ನಲ್ಲಿದೆಯೇ?' ಎಂದು ಕೇಳಲಿಲ್ಲ ಮೂರ್ಖ, ಪ್ರಯತ್ನವಿಲ್ಲದೆ ಫಲ ಲಭ್ಯವಾಗುತ್ತದೆಯೇ?"

"ಲಭ್ಯವಾಗುವಂತೆ ನೀವು ಹರಸಬೇಕಾಗಿತ್ತು...."

"ಏನು ಹರಸಬೇಕಾಗಿತ್ತು? ನೀನು ಕೈ ಹಿಡಿದ ಮಡದಿಯಲ್ಲಿ, ನನ್ನ ಪ್ರಯತ್ನದಿಂದ ಮಕ್ಕಳಾದರೆ ಅವರು ನಿನ್ನ ಮಕ್ಕಳಾಗುತ್ತಿದ್ದರೇ, ಅವರಿಂದ ನಿನ್ನ ವಂಶೋದ್ಧಾರವಾಗುತ್ತಿತ್ತೆ? ಆ ಹೆಂಡತಿ ನಿನ್ನವಳಾಗುತ್ತಿದ್ದಳೇ? ದಡ್ಡ – ತಾನು ಕೃಷಿ ಮಾಡದೆ, ಬೆಳೆ ಕೈಗೆ ಬರುತ್ತದೆಯೇ? ನಿನಗೆ ಬಯಕೆಯೇನೋ ಬೆಟ್ಟದಷ್ಟಿತ್ತು. ಆದರೆ ಏನು ಕೇಳಬೇಕು, ಏನು ಪಡೆಯಬೇಕು ಎಂಬ ವಿವೇಚನೆ ಇರಲಿಲ್ಲ. 'ಈ ನೆಲದಲ್ಲಿ ಬಂಗಾರವಿದೆಯೋ?' ಎಂದು ಕೇಳಿದರೆ 'ಇದೆ' ಎಂದೇ ಎಲ್ಲರೂ ಹೇಳುತ್ತಾರೆ. 'ಅದು ನನಗೆ ಸಿಕ್ಕುತ್ತದೆಯೇ?' ಎಂದರೆ 'ಸಿಕ್ಕುತ್ತದೆ' ಎಂದೇ ಹೇಳುತ್ತಾರೆ. ಆದರೆ ನೆಲದಲ್ಲಿಯ ಬಂಗಾರ ನಿನ್ನದಾಗಬೇಕಾದರೆ ನೀನು ಗಣಿ ತೋಡಬೇಕು. ಅದು ಬಿಟ್ಟು 'ಅವರು ಹೇಳಿದರು ನನಗೆ ಬಂಗಾರ ಸಿಕ್ಕುತ್ತದೆ' ಎಂದು ನಂಬಿ, ಆಕಾಶದಿಂದ ಬಂಗಾರ ಉದುರುವುದನ್ನು ನಿರೀಕ್ಷಿಸುತ್ತಾ ಕುಳಿತರೆ, ಕೊನೆಗೆ ನೀನು, ಬಂಗಾರವಿರುವ ನೆಲದ ಮಣ್ಣನ್ನೇ ಮುಕ್ಕಬೇಕಾಗುತ್ತದೆ. ಆದ್ದರಿಂದ ನನ್ನ ಮಾತು ನಂಬಿ ಇಹವನ್ನು ಕೆಡಿಸಿಕೊಂಡಂತೆ, ನನ್ನನ್ನು ನಿಂದಿಸಿ ಪರವನ್ನೂ ಕೆಡಿಸಿಕೊಳ್ಳಬೇಡ. ಮುಂದಿನ ಜನ್ಮಕ್ಕಾದರೂ ಭಗವಂತನನ್ನು ಬೇಡಿಕೋ — 'ದೇವರೇ, ನನಗೆ ಬಯಕೆಗಳನ್ನು ಕೊಟ್ಟಂತೆಯೇ ಅವನ್ನು ಸಾಧಿಸಿಕೊಳ್ಳುವ ಪ್ರಯತ್ನ ಶೀಲತೆಯನ್ನು ನೀಡು' ಎಂದು. ಆಗ ನಿನಗೆಲ್ಲವೂ ಒಳಿತಾಗುತ್ತದೆ."

ಸನ್ಯಾಸಿಗಳು ಹೇಳಿದುದನ್ನು ಕೇಳಿ, ಆ ಬಡವನಿಗೆ ತನ್ನ ಮೂರ್ಖತನ ಅರಿವಾಗಿ —

"ಗುರುವೇ, ನೀವು ಹೇಳಿದಂತೆ ಮಾಡುತ್ತೇನೆ. ಭಗವಂತನ ಚರಣಾರವಿಂದಗಳಲ್ಲಿ ನೀವು ಹೇಳಿದಂತೆ ಕೇಳುವ ಮತಿಯನ್ನು ಕರುಣಿಸಿ"

—ಎಂದು ಬೇಡಿ, ಅವರಿಂದ ಆ ಹರಕೆ ಪಡೆದು, ಶಾಂತಚಿತ್ತನಾಗಿ, ನಿರ್ವಿಕಾರನಾಗಿ ದೇಹವನ್ನು ಬಿಟ್ಟ.

ಇದು ನಾವು ಕೇಳಿದ ಬಡವನ ಕಥೆ. ನಿನ್ನ ಪರಿಸ್ಥಿತಿಯೂ ಈಗ ಹಾಗೇ ಇದೆಯೋ ಇಲ್ಲವೋ ನೋಡಿಕೋ ಭರಮಣ್ಣ, ವೃಥಾ ನಮ್ಮನ್ನೇಕೆ ನಿಷ್ಠುರಿ

ಗಳು ಎಂದು ಜರಿಯುತ್ತೀಯ? ದೇವರು ಕೊಟ್ಟ ಜೋಳಿಗೆ ಎಂದು ಆ ಜೋಳಿಗೆಯನ್ನು ಗೂಟಕ್ಕೆ ತೋತು ಹಾಕಿ ಕುಳಿತರೆ, ಹೊಟ್ಟೆ ತುಂಬುತ್ತದೆಯೇ? ಯೋಚಿಸಿ ನೋಡು ಭರಮಣ್ಣ. ನಿನ್ನದೂ ಆ ಬಡವನ ಕಥೆಯೇ ಆಹುದೋ ಅಲ್ಲವೋ? ನಿನ್ನ ಹೃದಯದಲ್ಲಿ ಹೆಬ್ಬಯಕೆಯಿದೆ; ಪೂರ್ವಾಪರ ಸಮುದ್ರಾಂಕಿತ ಪೃಥ್ವೀಪತಿಯಾಗಬೇಕು, ಆಚಂದ್ರಾರ್ಕಸ್ಥಾಯಿಯಾದ ಕೀರ್ತಿಬೇಕು ಎಂಬ ಬಯಕೆಯಿದೆ. ಕರ್ತೃತ್ವಶಾಲಿಯಾದ ಮನುಷ್ಯನ ಪಾಲಿಗೆ ಇವಾವೂ ಅಲಭ್ಯವಾದ ಬಯಕೆಗಳಲ್ಲ. ಆದ್ದರಿಂದ ಆ ದಾರಿಯಲ್ಲಿ ಕೆಲಸ ಮಾಡು. ಕ್ರಿಯಾಶೀಲವಾಗದ ಬಯಕೆ, ಭೀತಿಬದ್ಧವಾದ ಕ್ರಿಯೆ ಎರಡೂ ಫಲಕಾರಿಗಳಲ್ಲ. 'ಸೂರ್ಯ ಬೆಳಗುತ್ತಾನೆ' ಎಂದರೆ, ನನ್ನ ವಾಕ್ಶಕ್ತಿಯಿಂದಲೇ ಅವನು ಬೆಳಗುತ್ತಾನೆ ಎಂದು ಅರ್ಥವಲ್ಲ ಭರಮಣ್ಣ, ಅವನು ಬೆಳಗುವುದು ಅವನಲ್ಲಿಯ ಶಕ್ತಿಯಿಂದ. ಹಾಗೇ ನೀನು ರಾಜನಾಗುತ್ತೀಯ ಎಂದರೆ, ನಿನ್ನ ಅದೃಷ್ಟ ಹಾಗಿದೆ ಎಂದು ಅರ್ಥ. ನನ್ನ ಮಾತು ನಿನ್ನ ಅದೃಷ್ಟದ ಪ್ರತಿಧ್ವನಿ ಮಾತ್ರ. ಹಾಗೇ ಎಲ್ಲ ಮಾತುಗಳೂ ಭವಿಷ್ಯ ಹೇಳುವವನಿಗೂ ನಿನ್ನ ಭವಿಷ್ಯದಲ್ಲೇನಿದೆ ಎಂದು ಹೇಳುವ ಶಕ್ತಿಯಿದೆಯೇ ಹೊರತು, ಅದನ್ನು ಬದಲಿಸುವ ಶಕ್ತಿ ಇರುವುದಿಲ್ಲ. ಆಗ ಬೇಕಾದುದು ಆಗಿಯೇ ತೀರುತ್ತದೆ; ಯಾರು ಹೇಳಿದರೂ ನೀನು ನಡೆಯುವುದು ನಿನ್ನ ಪುರಾಕೃತ ಕರ್ಮದ ಮಾರ್ಗದಲ್ಲಿಯೇ. ಈ ಮಾತು ವ್ಯಕ್ತಿಯ ಬಗ್ಗೆ ಎಷ್ಟು ಮಟ್ಟಿಗೆ ನಿಜವೋ ಒಂದು ರಾಜ್ಯದ ಬಗ್ಗೆಯೂ ಅಷ್ಟೇ ಸತ್ಯ. ಅದಕ್ಕಾಗಿಯೇ ಅಂದೂ ನಾನು ನಿನಗೆ 'ಘೋರವಾದುದನ್ನು ನೋಡಬಲ್ಲ ಶಕ್ತಿ ಇಲ್ಲದಿದ್ದವರು, ಅದೇನೆಂದು ತಿಳಿಯಲೂ ಯತ್ನಿಸಬಾರದೆ'ಂದು ಹೇಳಿದುದು. ಗುರು ಗುಹೇಶ್ವರನನ್ನು ಒಲಿಸಿಕೊಂಡು, ಆತನನ್ನು ತನ್ನ ಮುದ್ದಳಿಯ ತಾಳಕ್ಕೆ ಕುಣಿಸಿದ ನನ್ನ ಶ್ರೀ ಗುರು ಅಲ್ಲಮ ಮಹಾಪ್ರಭುವಿಗೆ 'ಕಲ್ಯಾಣದಲ್ಲಿ ಕ್ರಾಂತಿಯಾಗುತ್ತದೆ, ಬಿಜ್ಜಳನ ವಧೆಯಾಗುತ್ತದೆ, ಆ ಕಗ್ಗೊಲೆಯನ್ನು ಕಂಡು ಚಿರದುಃಖಿಗಳಾಗಿ ಭಕ್ತಿಭಂಡಾರಿ ಬಸವಣ್ಣನವರು, ತಮ್ಮ ನಚ್ಚಿನ ಕಲ್ಯಾಣವನ್ನು ತ್ಯಜಿಸಿ ಸಂಗಮದಲ್ಲಿ ಹೋಗಿ ಬಯಲಾಗಬೇಕಾಗುತ್ತದೆ' ಎಂಬುದು ತಿಳಿದಿರಲಿಲ್ಲವೇ? ಆದರೂ ಅವರು ಅದನ್ನು ತಮ್ಮ ಕಾರುಣ್ಯದ ಕಂದನಾದ ಬಸವಣ್ಣನಿಗೆ ಏಕೆ ಅರುಹಲಿಲ್ಲ? ಒಂದು ಮಾತನ್ನು ಅರಿತುಕೋ ಭರಮಣ್ಣ, 'ಆಡುವವರೆಲ್ಲಾ ತಿಳಿದವರಲ್ಲ; ತಿಳಿದವರು ಆಡುವುದಿಲ್ಲ.' ಅದಕ್ಕಾಗಿಯೇ ಶಿವಸಾನ್ನಿಧ್ಯದಲ್ಲಿ ಮೌನ. ಶಿವ

ಸಂಗನುವಲ್ಲಿ ಬಯಲು. ಇದೇ ಆ ಪ್ರಣವಸ್ವರೂಪಿ ನಿರಂಜನ ಸದ್ಗುರು ಅಲ್ಲಮ ಪ್ರಭು ದೇವರು ಸಾರಿದ ದಿವ್ಯಾನುಭಾವ. 'ಉರಿಮುಟ್ಟಿದ ಕಪ್ಪುರದಂತೆ' ಎಂಬ ಅನುಭಾವವಾಣಿಯ ಅರ್ಥವಿದೇ ಭರಮಣ್ಣ. ಉರಿ ಸೋಂಕಿದ ಬಳಿಕ ಕಪ್ಪುರವೂ ಇಲ್ಲ, ಉರಿಯೂ ಇಲ್ಲ.' 'ಬಯಲು ಬಯಲನ್ನೇ ಕೂಡಿತ್ತು ಗುಹೇಶ್ವರಾ!"

—ಯಾವುದೋ ಅದನ್ಯ ದೇವೀ ಶಕ್ತಿ ತಮ್ಮನ್ನು ನುಡಿಸುತ್ತಿರುವಂತೆ ಹೇಳಿದರು ಮುರಘರಾಜೇಂದ್ರ ಸ್ವಾಮಿಗಳು.

ಅವರು ಆ ಮಾತುಗಳನ್ನಾಡುತ್ತಿರುವಾಗ, ಧವಳ ತ್ರಿಪುಂಡ್ರ ಸುಶೋಭಿತ ವಾದ ಅವರ ವದನಾರವಿಂದದ ಸುತ್ತಲೂ ದೇದೀಪ್ಯಮಾನವಾದ ಪ್ರಭಾವಲಯ ವೊಂದು, ಕೋಟಿ ವಿದ್ಯುಲ್ಲತೆಗಳ ಕಾಂತಿಯಿಂದ ಸುತ್ತುವರಿದಂತಿತ್ತು. ಆ ಮಾತನ್ನಾಡುವಾಗ ಅರುಣಾರುಣ ಕಿರಣೋಪಮ ಕಾಷಾಯಾಂಬರಧಾರಿ ಗಳಾದ ಗುರುಗಳುವ್ಯೈವೆತ್ತ ದಿವ್ಯಜ್ಯೋತಿಯಂತೆ ಕಂಗೊಳಿಸಿದರು.

ಆ ಮೈವೆತ್ತ ದಿವ್ಯತೆಯ ಇದಿರು, ಬೇರೇನೂ ಮಾತನಾಡಲಾಗದೆ ಭರಮಣ್ಣನಾಯಕರು

"ಗುರುವೇ, ನಿನ್ನ ಶ್ರೀ ಚರಣದ ಕರುಣೆಯ ಕಂದ ನಾನು. ಕತ್ತಲಲ್ಲಿ ಬೆಳಕನ್ನು ಅರಸಿ ಹಲುಬುತ್ತಿರುವ ಶಿಶು ನಾನು. ಸ್ವೀಕರಿಸು ಪ್ರಭೋ – ನನ್ನಿಂದಾದುದೆಲ್ಲವೂ ನಿನ್ನ ಸೇವೆಯೇ."

—ಎಂದು ನುಡಿದು, ಗುರುಪಾದಕ್ಕೆ ಅಡ್ಡಬಿದ್ದು ನಮಿಸಿದರು.

"ನಿನ್ನ ಸೇವೆ ಶಿವನಿಗೆ ಅರ್ಪಿತವಾಗಲಿ, ಒಪ್ಪಿಗೆಯಾಗಲಿ, ಶುಭವಾಗಲಿ"

—ಎಂದು ಸ್ವಾಮಿಗಳು ಪ್ರಸನ್ನ ಶುಭ ಧ್ವನಿಯಲ್ಲಿ ನಾಯಕರನ್ನು ಆಶೀರ್ವದಿಸಿದರು.

೯

ಸ್ವಾಮಿಗಳನ್ನು ಕಂಡು ಅವರೊಂದಿಗೆ ಮಾತನಾಡಿಕೊಂಡು ಬಂದ ಬಳಿಕ, ನಾಯಕನ ಜೀವನ ದೃಷ್ಟಿಯೇ ಬೇರೆಯಾಯಿತು. ಫಲಾಫಲಗಳ ಚಿಂತೆ ಮಾಡುತ್ತಾ ಕ್ರಿಯಾಹೀನನಾಗಿ ಕುಳಿತುಕೊಳ್ಳುವ ಜಡತೆಯನ್ನು

ದೂರ ಮಾಡಿ, ಕೇವಲ ಸಾಕ್ಷೀಭಾವದಿಂದ, ಬಂದದ್ದನ್ನು ಭೋಗಿಸುತ್ತಾ, ತನ್ನ ಕರ್ತವ್ಯವನ್ನು ಮಾಡುತ್ತಾ ಹೋಗುವುದೇ ನಿಜವಾದ, ಸಚೇತನವಾದ ಜೀವನ ದೃಷ್ಟಿ ಎಂಬುದನ್ನು ಅರಿತು, ಆ ಅರಿವು ಮೂಡಿದ ಗಳಿಗೆಯಿಂದಲೂ ತನ್ನ ಬಾಳ ತೇರನ್ನು ಆದರ್ಶದ ಪಥದಲ್ಲಿ ನಡೆಸಲು ನಿಶ್ಚಯಿಸಿದರು—

ಅದರಂತೆಯೇ, ಮರುದಿನವೇ, ಸೇನಾನಾಯಕತ್ವಕ್ಕೆ ನಿಯೋಜಿತ ರಾಗಿದ್ದ ಹೊಳಲಕೆರೆ ಬೊಮ್ಮಣ್ಣ, ಕುದುತನಿ ವೆಂಕಣ್ಣ, ಜರ್ಾ ಡ್ಯುವ್ಹೋರೋ ಮೊದಲಾದವರನ್ನೂ, ದಳವಾಯಿ ಭರಮಣ್ಣ, ಪ್ರಧಾನಿ ಪರಶುರಾಮಪ್ಪ ಇವರನ್ನೂ ಕರೆಯಿಸಿ, ಮಂತ್ರಾಲೋಚನೆ ಮಾಡಿದರು. ದುರ್ಗದಲ್ಲಿ ಎಷ್ಟು ಸೇನೆ ಜಮಾವಣೆಯಾಗಿದೆ, ಅದರಲ್ಲಿ ಬೇರೆ ಬೇರೆ ಬಲಗಳೆಷ್ಟು, ಅದರ ಪೈಕಿ, ಅಗತ್ಯಬಿದ್ದರೆ ದುರ್ಗದ ರಕ್ಷಣೆಗೆ ಎಷ್ಟು ಸೇನೆ ಬೇಕಾಗುತ್ತದೆ ಎಂಬ ವಿವರ ಗಳನ್ನೆಲ್ಲಾ ದಳವಾಯಿ ಭರಮಣ್ಣನಿಂದ ತಿಳಿದುಕೊಂಡು, ಹೊಳಲಕೆರೆ ಬೊಮ್ಮಣ್ಣನನ್ನು, ಸೀರ್ಯದವರ ಸಹಾಯಕ್ಕೆ ಹೋಗಲು ಎಷ್ಟು ಸೇನೆ ಬೇಕಾಗುತ್ತದೆ ಎಂದು ವಿಚಾರಿಸಿದರು.

ಆ ವೇಳೆಗೆ ಬೇಹುಗಾರರಿಂದ, ಮರಾಟರ ಬಲ ಎಷ್ಟಿರಬಹುದು, ಅದನ್ನು ವಿರೋಧಿಸುವ ಸೀರ್ಯದವರ ಫೌಜಿನ ಬಲಾಬಲಗಳೆಷ್ಟು ಎಂಬು ದನ್ನು ತಿಳಿದುಕೊಂಡಿದ್ದ ಬೊಮ್ಮಣ್ಣ—

"ಕಡೆಯ ಪಕ್ಷ ಹತ್ತುಸಾವಿರ ಕಾಲಾಳುಬಲ, ಅದಕ್ಕೆ ತಕ್ಕ ಅಶ್ವಗಜ ಬಲ, ಸುಮಾರು ಐವತ್ತು ತೋಫಿನ ಗಾಡಿಗಳಾದರೂ ಬೇಕಾಗುತ್ತವೆ"

—ಎಂದು ಹೇಳಿದ.

ಕುದುತನಿ ವೆಂಕಣ್ಣನೂ ಬೊಮ್ಮಣ್ಣನ ಮಾತಿಗೆ ತನ್ನ ಅನುಮೋದನೆ ಯನ್ನು ಸೂಚಿಸಿದ.

ಅವರ ಮಾತು ಮುಗಿದ ಬಳಿಕ–ಜರ್ಾ ಡ್ಯೂವ್ಹೋರೋ ಎದ್ದುನಿಂತು—

"ಈ ವಿಷಯದಲ್ಲಿ ನಾನೂ ನನ್ನ ಅಭಿಪ್ರಾಯ ಸೂಚಿಸಬಹುದೇ ?"

—ಎಂದು ಕೇಳಿದ.

"ಹೇಳಿ ಅದಕ್ಕಾಗಿಯೇ ನಿಮ್ಮನ್ನು ಇಲ್ಲಿಗೆ ಕರೆಸಿರುವುದು."

—ಎಂದರು ನಾಯಕರು.

"ನಾನು ನನಗೆ ತಿಳಿದ ಮಾತನ್ನು ಸ್ಪಷ್ಟವಾಗಿ ಹೇಳಿದರೆ ಆ ಬಗ್ಗೆ ಯಾರೂ ಅನ್ಯಥಾ ಭಾವಿಸಬಾರದು. ಆ ಭರವಸೆ ಕೊಟ್ಟರೆ ಹೇಳುತ್ತೇನೆ."

"ಹೇಳಿ."

—ಅಲ್ಲಿ ನೆರೆದ ಎಲ್ಲರ ಪರವಾಗಿ ನಾಯಕರೇ ಹೇಳಿದರು.

"ಚಿತ್ರದುರ್ಗದ ಫೌಜಿಗೆ ಇದುವರೆಗೂ ಮರಾಟರ ಬಲದೊಂದಿಗೆ, ಅದರಲ್ಲೂ ಈಗ ಸಂತೋಜಿ ಘೋರ್ಪಡೆ ತನ್ನೊಂದಿಗೆ ತಂದಿರುವಂಥ ಬಲದೊಂದಿಗೆ ಲಡಾಯಿ ಮಾಡುವ ಪ್ರಸಂಗವೇ ಬಂದಿರಲಿಲ್ಲವೆಂದು ತೋರುತ್ತದೆ–ತಮ್ಮ ಫೌಜುದಾರರು ಹೇಳಿದ ಮಾತನ್ನು ಕೇಳಿದರೆ."

"ಇದುವರೆಗೂ ಮರಾಟರನ್ನು ಎದುರಿಸಬೇಕಾದ ಪ್ರಸಂಗ ನಮಗೆ ಬಂದಿರಲಿಲ್ಲವೆಂಬುದೇನೋ ನಿಜ, ಆದರೆ ನಮ್ಮ ಫೌಜುದಾರರ ಮಾತಿನಲ್ಲಿರುವ ತಪ್ಪೇನು ?"

"ಹಿಂದೆ ಮರಾಟರನ್ನು ಎದುರಿಸುವಾಗ ಮೊಗಲ್ ದಳಪತಿಗಳು ಏನು ತಪ್ಪು ಮಾಡುತ್ತಿದ್ದರೋ, ಅದೇ ತಪ್ಪನ್ನೇ ಮಾಡುವ ಸಿದ್ಧತೆಯಲ್ಲಿದ್ದಾರೆ ನಮ್ಮ ಫೌಜುದಾರ ಮಿತ್ರರು."

"ಅಂದರೆ–ತಮ್ಮ ಮಾತಿನ ಅರ್ಥವೇನೋ ಸ್ಪಷ್ಟಪಡಿಸಬೇಕು."

—ದಳವಾಯಿ ಭರಮಣ್ಣ ಕೇಳಿದ.

"ಹಿಂದೆ ಮೊಗಲ್ ಸೇನೆಗಳು ಮರಾಟರನ್ನು ಎದುರಿಸಿ, ಲಡಾಯಿ ಮಾಡಬೇಕಾದ ಸಂದರ್ಭ ಬಂದಾಗ, ಮೊಗಲ್ ಸರದಾರರೂ ಹೀಗೇ ಬಹು ದೊಡ್ಡ ಸೇನೆ, ಲಕ್ಷಾಂತರ ಗಜಾಶ್ವಬಲ, ನೂರಾರು ತೋಫಿನ ಗಾಡಿಗಳನ್ನು ತೆಗೆದುಕೊಂಡು, ಗೆದ್ದೇ ಬರುತ್ತೇವೆ ಎಂದು ಹೋಗುತ್ತಿದ್ದರು. ಅವರ ಸೇನಾಬಲದ ಇದಿರು, ಮರಾಟರದನ್ನು ಹೋಲಿಸಿದಾಗ, ಸಂಖ್ಯಾಬಲದಿಂದಲೇ ಮೊಗಲರಿಗೆ ಗೆಲುವಾಗೇ ಆಗುತ್ತದೆ ಎಂದು ಎಲ್ಲರೂ ನಂಬುತ್ತಿದ್ದರು. ಆದರೆ ನೂರಕ್ಕೆ ತೊಂಭತ್ತು ಬಾರಿ, ಮೊಗಲ್ ಸೇನೆ, ಸೋತು ನಾಶವಾಗುತ್ತಿತ್ತು. ಯಾವುದರ ಬಲದಿಂದ ಮರಾಟರನ್ನು ಹುಟ್ಟಡಗಿಸುತ್ತೇವೆ ಎಂದು ಮೊಗಲರು ಕನಸು ಕಟ್ಟುತ್ತಿದ್ದರೋ, ಆ ಸಂಖ್ಯಾಬಲವೇ, ಆ ಸೇನೆಯ ಅಗಾಧತೆಯೇ, ಮೊಗಲ್ ಸೇನೆಗೆ, ಮರಾಟರಿಗಿಂತ ಹೆಚ್ಚಿನ ವೈರಿಯಾಗುತ್ತಿತ್ತು. ಆದುದರಿಂದ ದುರ್ಗದವರೂ ಆ ತಪ್ಪು ಮಾಡಬಾರದು."

"ನಿಮ್ಮ ಅಭಿಪ್ರಾಯವೇನೆಂದು ಕೊಂಚ ವಿಶದವಾಗಿ ವಿವರಿಸುತ್ತೀರಾ?"

—ಜಾನ ಮಾತುಗಳ ಬಗ್ಗೆ ಕಟಕ್ಕನೆ ಆಸಕ್ತಿ ಕೆರಳಿ ಕೇಳಿದರು ನಾಯಕರು.

“ಅಪ್ಪಣೆಯಾದರೆ ವಿವರಿಸುತ್ತೇನೆ – ಯುದ್ಧದಲ್ಲಿ ವಿಜಯ ಪ್ರಾಪ್ತಿಯಾಗಲು ಸಾಕಷ್ಟು ಸೇನಾಬಲ ಬೇಕೆಂಬುದು ನಿಜವಾದರೂ, ಕೇವಲ ಸೇನಾಬಲದ ಮೇಲೆ ಜಯಾಪಜಯಗಳು ಅವಲಂಬಿತವಾಗಿಲ್ಲ. ನಮ್ಮ ಸೇನಾಬಲಕ್ಕಿಂತಲೂ ಹೆಚ್ಚಾಗಿ, ಶತ್ರುಬಲದ ರಚನೆ, ರೀತಿ, ನೀತಿ, ಅವರ ಯುದ್ಧ ಕ್ರಮ ಇವುಗಳ ಆಪ್ತಪರಿಚಯ ಅತಿ ಮುಖ್ಯ. ಶತ್ರು ನಮ್ಮನ್ನು ಗೆಲ್ಲಲು ಯಾವ ಬಗೆಯ ಯುದ್ಧಕ್ರಮವನ್ನು ಅನುಸರಿಸುತ್ತಾನೆ ಎಂದು ಅರಿತುಕೊಂಡು ಅದಕ್ಕೆ ತಕ್ಕ ಹಾಗೆ ನಮ್ಮ ದಳಗಳನ್ನು ರಚಿಸಿಕೊಳ್ಳಬೇಕು.

“ನನಗೆ ತಿಳಿದಮಟ್ಟಿಗೆ, ಮರಾಟರು ಎಂದೂ, ಚಪಲಚಲನೆಗೆ ಹೊರೆಯಾಗುವಷ್ಟು ಹಿರಿದಾದ ಸೇನೆಯನ್ನು ರಣರಂಗಕ್ಕೆ ಇಳಿಸುವುದಿಲ್ಲ. ಸೇನಾಚಲನೆಯನ್ನು ನಿಧಾನಗೊಳಿಸುವ ಗಜಗಳನ್ನಾಗಲೀ, ದೊಡ್ಡ ತೋಫಿನ ಗಾಡಿಗಳನ್ನಾಗಿಲಿ ಬಳಸುವುದಿಲ್ಲ. ಅದಕ್ಕೆ ಪ್ರತಿಯಾಗಿ, ಮಿಂಚಿನ ವೇಗದಿಂದ ಸಂಚರಿಸಬಲ್ಲ ಸಣ್ಣ ಸಣ್ಣ ‘ತುಕಡಿ’ಗಳನ್ನು ಮಾಡಿಕೊಂಡು, ‘ಗನೀಮಿಕಾವಾ’ (ಮರೆ ಹುಯಿಲು) ಯುದ್ಧರೀತಿಯಲ್ಲಿ ಕ್ರಮೇಣ ಶತ್ರುವನ್ನು ದುರ್ಬಲಗೊಳಿಸಿ, ಸಂತ್ರಸ್ತನಾದ ಶತ್ರು, ತಮಗೆ ಅನುಕೂಲವಾದ ಕಡೆಯಲ್ಲಿ ಸಿಕ್ಕಾಗ, ಅವನ ಮೇಲೆ ಮಿಂಚಿನ ದಾಳಿ ಮಾಡಿ, ಅವನನ್ನು ಮುಗಿಸುತ್ತಾರೆ. ಇದು ಅವರು ಅನುಸರಿಸುವ ಯುದ್ಧ ಕ್ರಮ.

“ಹೀಗೆ, ಈ ಬಗೆಯ ಯುದ್ಧಕ್ರಮಕ್ಕೆ ರಚನೆಯಾದ ಮರಾಟರ ಸೇನೆಯನ್ನು ಎದುರಿಸಲು, ನಾವು ಬಹು ದೊಡ್ಡ, ನಿಧಾನವಾಗಿ ಚಲಿಸುವ ಸೇನೆಯನ್ನು ಕಟ್ಟಿಕೊಂಡು ಹೋದರೆ, ಅದೇ ನಮಗೆ ಮುಳುವಾಗುತ್ತದೆ. ದೊಡ್ಡ ಸೇನೆಗೆ ಆಹಾರ ವ್ಯವಸ್ಥೆ ಮಾಡುವುದು ನಮಗೆ ಎಷ್ಟು ಕಷ್ಟಸಾಧ್ಯವಾಗುತ್ತದೆಯೋ, ಶತ್ರು ಸೇನೆಗೆ ನಮ್ಮ ಆಹಾರ ದೊರೆಯದಂತೆ ಮಾಡುವುದು ಅಷ್ಟೇ ಸುಲಭವಾಗುತ್ತದೆ. ಆಹಾರವೇ ನಮ್ಮ ವೈರಿಯಾಗಿ ನಮ್ಮನ್ನು ಸೋಲಿಸುತ್ತದೆ.

“ಸಂತೋಜಿ ಘೋರ್ಪಡೆಯದು ಪ್ರಬಲವಾದ ಅಶ್ವಬಲವೆಂದು ನನಗೆ ತಿಳಿದಿದೆ. ಆದುದರಿಂದ ಆತ, ಮಾಮೂಲಾದ ಮರಾಟರ ಯುದ್ಧಕ್ರಮವನ್ನೇ ಅನುಸರಿಸುತ್ತಾನೆ” ಎಂದು ಹೇಳಬಲ್ಲೆ.

“ಈ ಕಾರಣಕ್ಕಾಗಿ, ಅವರ ವಿರುದ್ಧ ದೊಡ್ಡ ಸೇನೆಯನ್ನು

ಕೊಂಡೊಯ್ಯಬೇಕೆಂಬ ಮಾನ್ಯ ಫೌಜುದಾರರ ಸಲಹೆ, ನನಗೆ ಅಷ್ಟಾಗಿ ಸೂಕ್ತವೆಂದು ತೋರುವುದಿಲ್ಲ."

—ಎಂಬುದಾಗಿ ಜಾರ್ಜ್ ತನ್ನ ಅಭಿಪ್ರಾಯವನ್ನು ವಿವರಿಸಿದ.

"ನೀವು ಹೇಳಿದಂತೆಯೇ ಸಂತೋಜಿ ಘೋರ್ಪಡೆಯ ಬೆನ್ನೆಲುಬು ಅವನ ಅಶ್ವಬಲ. ಆದರೆ ಅವರ ಸಂಖ್ಯೆ ಸಣ್ಣದಲ್ಲ. ಅವನ ಅಶ್ವಬಲದ ಸಂಖ್ಯೆಯೇ ಇಪ್ಪತ್ತು ಸಾವಿರವೆಂದು ಕೇಳಿದೇನೆ. ಒಮ್ಮೆಗೆ, ಆ ಬಲವನ್ನು ಎದುರಿಸಬೇಕಾದ ಪ್ರಸಂಗ ಬಂದರೆ, ನಮ್ಮಲ್ಲಿ ಸಾಕಷ್ಟು ಸೇನಾಬಲವಿಲ್ಲದೆ ಎದರಿಸುವುದು ಸಾಧ್ಯವಾಗುತ್ತದೆಯೋ ?"

—ದಳವಾಯಿ ಭರಮಣ್ಣ ಪ್ರಶ್ನೆ ಮಾಡಿದ.

"ಆದರೆ ನಾವು ಏಕಾಂಗಿಗಳಾಗಿ ಮರಾಟರನ್ನು ಎದುರಿಸುತ್ತಿಲ್ಲವಲ್ಲ. ನಾವು ಹೋಗುತ್ತಿರುವುದು ಮುಖ್ಯವಾಗಿ ಸೀರ್ಯದವರಿಗೆ ನೆರವು ನೀಡಲು, ಅಲ್ಲವೇ ?"

"ಅಹುದು"

"ಹಾಗಿರುವಾಗ, ಒಂದು ವೇಳೆ ಸಂತೋಜಿ ಸೀರ್ಯದವರನ್ನು ಗೆಲ್ಲಲು ತನ್ನ ಸಮಸ್ತ ಸೇನೆಯನ್ನೂ ಪ್ರಯೋಗಿಸಿದರೆ, ಆಗ, ಅದನ್ನು ನಿಂತು ಎದುರಿಸುವ ಕೆಲಸವನ್ನು ಸೀರ್ಯದ ಸೇನೆಗೆ ಬಿಟ್ಟು, ನಾವು ಹಿಂಬದಿಯಿಂದ ಮರಾಟರ ಮೇಲೆ ದಾಳಿ ಮಾಡಿದರಾಯಿತು. ಆಗ ಇಬ್ಬದಿಯ ಆಘಾತಕ್ಕೆ ಸಿಲುಕಿ ಮರಾಟರು ಸೋಲುತ್ತಾರೆ. ಯಾವುದೇ ದೃಷ್ಟಿಯಿಂದ ನೋಡಿದರೂ ನನಗೆ ತೋರುವುದಿಷ್ಟೆ – ನಮ್ಮ ಸೇನೆಗಳು ಬಹು ವೇಗವಾಗಿ ಚಲಿಸಲು ತಕ್ಕದಾಗಿರಬೇಕು. ಅದೊಂದೇ ಮರಾಟರನ್ನು ಗೆಲ್ಲಲು ದಾರಿ. ನನಗೆ ತಿಳಿದ ಮಾತನ್ನು ಹೇಳಿದೇನೆ – ಮುಂದಿನದು ತಮ್ಮ ಇಷ್ಟ."

—ಎಂದು ಹೇಳಿ ಜಾರ್ಜ್ ಕುಳಿತುಕೊಂಡ.

ಜಾರ್ಜ್ ವಿವರಿಸಿದುದನ್ನೆಲ್ಲವನ್ನೂ ಕೇಳಿ, ಆಲೋಚನೆ ಮಾಡಿದ ಬಳಿಕ, ಉಳಿದವರಿಗೂ ಆತನ ಮಾತಿನಲ್ಲಿ ಹೆಚ್ಚು ಅರ್ಥವಿದೆ ಎಂಬುದು ಅರಿವಾಗಿ ಕೊನೆಗೆ ನಾಯಕರು —

"ಜಾರ್ಜ್ ಸಾಹೇಬರು ಹೇಳಿದ ಮಾತಿನಲ್ಲಿ ಹೆಚ್ಚು ಸತ್ಯವಿರುವಂತೆ ಕಾಣುತ್ತದೆ. ಅವರು ಹೇಳಿದ ರೀತಿಯಲ್ಲಿ ಸಮರಸಿದ್ಧತೆ ಮಾಡಿಕೊಳ್ಳುವುದು ಯುಕ್ತವೆಂದು ನಮಗೆ ತೋರುತ್ತದೆ. ಮರಾಟರ ವಿಷಯದಲ್ಲಿ, ಅವರಿಗೆ

ನಮ್ಮವರಿಗಿಂತ ಹೆಚ್ಚಿನ ಪರಿಶ್ರಮವಿರುವುದರಿಂದ, ನಮ್ಮ ಸೇನಾನಾಯಕರಾದ ಹೊಳಲುಕೆರೆ ಬೊಮ್ಮಣ್ಣನವರೂ, ಕುಡುತನಿ ವೆಂಕಣ್ಣನವರೂ, ಜಾರ್ಜ ಸಾಹೇಬರನ್ನು ಪರಕೀಯರಂತೆ ಭಾವಿಸದೆ, ಅಗತ್ಯ ಸಮಯದಲ್ಲಿ ಅವರ ಸಲಹೆಯಂತೆ ನಡೆಯುವುದು ಸೂಕ್ತವೆಂದು ತೋರುತ್ತದೆ. ಅದಕ್ಕೆ ನಮ್ಮವರದೇನೂ ಅಭ್ಯಂತರವಿಲ್ಲವೆಂದೇ ನಾವು ಭಾವಿಸುತ್ತೇವೆ." — ಎಂದರು.

ನಾಯಕರ ಮಾತಿಗೆ ಉತ್ತರವಾಗಿ ಕುಡುತನಿ ವೆಂಕಣ್ಣ ತಾವು ಮೂವರೂ, ಪರಸ್ಪರ ಭಿನ್ನಾಭಿಪ್ರಾಯಕ್ಕೆ ಅವಕಾಶವಿಲ್ಲದಂತೆ ಏಕೀಭವಿಸಿ ಕೆಲಸ ಮಾಡುವುದಾಗಿ ಮಾತುಕೊಟ್ಟ ಬಳಿಕ, ಸೇನೆ ಎಂದು ಹೊರಡುವುದೆಂಬ ಬಗ್ಗೆ ರಾಜಪುರೋಹಿತ ವಿರೂಪಾಕ್ಷ ಜೋಯಿಸರನ್ನು ಕೇಳಿ ಕೂಡಲೇ ಮುಹೂರ್ತ ನಿಶ್ಚಯಿಸುವುದೆಂದು ತೀರ್ಮಾನವಾಗಿ, ಸಭೆ ಬರಖಾಸ್ತಾಗಲು ನಾಯಕರು ಅನುಮತಿ ಕೊಟ್ಟರು.

ಉಳಿದವರೆಲ್ಲರೂ ವೀಳಯ ತೆಗೆದುಕೊಂಡು ಹೊರಟು ಹೋದರೂ, ಪ್ರಧಾನಿ ಪರಶುರಾಮಪ್ಪನವರು ತಾವು ಹೋಗದೆ ನಿಂತುದನ್ನು ಕಂಡ ನಾಯಕರು —

"ಏನು ಪರಶುರಾಮಪ್ಪನವರೇ, ಮತ್ತೇನಾದರೂ ಮಾತನಾಡುವ ವಿಷಯವಿತ್ತೇ ?"

—ಎಂದು ಪ್ರಶ್ನೆ ಮಾಡಿದರು

"ಪ್ರಭುಗಳಲ್ಲಿ ಒಂದು ವಿಷಯ ಅರಿಕೆ ಮಾಡಿಕೊಳ್ಳುವುದಿತ್ತು."

"ಏನು ಹೇಳಿ ?"

"ತಾವು ಆ ವಿದೇಶಿ ಜಾರ್ಜ ಸಾಹೇಬರನ್ನು ನಮ್ಮ ಸೇನೆಯಲ್ಲಿ ಮುಖ್ಯಸ್ಥನನ್ನಾಗಿ ಮಾಡಿ ಕಳಿಸುತ್ತಿರುವುದು ಅಷ್ಟು ಉಚಿತವಾಗಲಿಲ್ಲವೇನೋ ಎಂದು ತೋರುತ್ತದೆ."

"ಏಕೆ ?"

—ಪರಶುರಾಮಪ್ಪನವರು ಹೇಳಿದನ್ನು ಕೇಳಿ, ಚಕಿತರಾಗಿ ಕೇಳಿದರು ನಾಯಕರು.

"ಈಗೆರಡುದಿನದ ಹಿಂದೆ, ಜಾರ್ಜ ಸಾಹೇಬರ ಬಗ್ಗೆ ಒಂದು ವಿಷಯ ನನ್ನ ಕಿವಿಗೆ ಬಿತ್ತು."

"ಏನು ?"

"ಮೊನ್ನೆಯ ದಿನ ಸಂಜೆ, ಬಿಜಾಪುರದ ಗಾಯಕಿ ಮೆಹರ್ ಬಾನು ಸಾಹಿಬಾ, ಏಕಾಂಗಿಯಾಗಿ ಜಾರ್ಜ್ ಸಾಹೇಬರ ಮನೆಗೆ ಹೋಗಿ, ಬಹಳ ಹೊತ್ತು ಅಲ್ಲಿದ್ದು ಬಂದರಂತೆ."

"ಆ! – ಅಹುದೇ? ಅವರೀರ್ವರೂ ಪರಸ್ಪರ ಅಪರಿಚಯಸ್ಥರೆಂದು ನಾವು ತಿಳಿದಿದ್ದೆವಲ್ಲಾ...."

"ನಾವೂ ಹಾಗೆಯೇ ತಿಳಿದಿದ್ದೆವು. ಆದರೆ ವಾಸ್ತವಸ್ಥಿತಿ ಬೇರೆಯೇ ಇರುವಂತೆ ಕಾಣುತ್ತದೆ. ಇದೇ ಅವರಿಬ್ಬರ ಮೊದಲ ಭೇಟಿಯೇನೂ ಅಲ್ಲ. ಕೆಲವು ದಿನಗಳ ಹಿಂದೆ, ಅಂದರೆ, ಅರಮನೆಯಲ್ಲಿ ಮೆಹರ್ ಬಾನುವಿನ ಸಂಗೀತ ಕಛೇರಿ ಎರಡನೆಯ ಬಾರಿ ಆದ ಮರುದಿನ, ಜಾರ್ಜ್ ಸಾಹೇಬ ಮೆಹರ್ ಬಾನುವಿನ ಮನೆಗೆ ಹೋಗಿದ್ದನೆಂಬ ಸುದ್ದಿಯೂ ಬಂದಿತ್ತು. ಆ ದಿನ ಅದನ್ನು ನಾನು ಅಷ್ಟಾಗಿ ಮನಸ್ಸಿಗೆ ತಂದುಕೊಳ್ಳಲಿಲ್ಲ. ಈಗ ನೋಡಿದರೇ ಏಕೋ ಅನುಮಾನವಾಗುತ್ತಿದೆ."

"ಏನು ಅನುಮಾನ?"

"ಮೆಹರ್ ಬಾನು ನಿಮ್ಮನ್ನು ಮೆಚ್ಚಿಸಿ, ಸೀರ್ಯದವರಿಗೆ ಸಹಾಯ ಮಾಡಿ ಎಂದು ಬೇಡುವುದು, ಸೀರ್ಯದವರಿಗೆ ಸಹಾಯ ಮಾಡಲು ನಾವು ಸೇನೆ ಕಳುಹುವ ಹೊತ್ತಿನಲ್ಲಿ ಸಂತೋಜಿ ಘೋರ್ಪಡೆಯ ಮೇಲೆ ಸೇಡು ತೀರಿಸಬೇಕು ಎಂಬ ನೆಪದ ಮೇಲೆ, ಜಾರ್ಜ್ ಸಾಹೇಬ ನಮ್ಮ ಸೇನೆಯೊಂದಿಗೆ ಹೊರಡುವುದು ಇದನ್ನೆಲ್ಲಾ ಒಂದಕ್ಕೊಂದು ತಳಕು ಹಾಕಿ ನೋಡಿದರೆ, ನನ್ನ ಮನದಲ್ಲಿ ಏನೋ ಅನುಮಾನ ಮೂಡುತ್ತಿದೆ."

"ಅಂದರೆ ಇದರಲ್ಲೆಲ್ಲಾ ಏನಾದರೂ ದುರಭಿಸಂಧಿ ಇರಬಹುದೆಂದು ನಿಮ್ಮ ಅಭಿಪ್ರಾಯವೇ?"

"ಏನೋ – ಖಚಿತವಾಗಿ ಹೇಳಲಾರೆ. ಆದರೂ ಅನುಮಾನಕ್ಕೆ ಕಾರಣವಿದೆ. ಮೊದಲು ಅಷ್ಟು ಬೇಗ ದುರ್ಗದಿಂದ ಹೋಗಲು ತವಕಿಸುತ್ತಿದ್ದ ಮೆಹರ್ ಬಾನು ಈಗ ಆ ಪ್ರಸ್ತಾಪವನ್ನೇ ಮಾಡದಿರುವುದನ್ನು ಕಂಡು ಆ ಅನುಮಾನ ಬಲವಾಗುತ್ತಿದೆ. ಎಷ್ಟಾದರೂ ಮೆಹರ್ ಬಾನು, ಸೀರ್ಯದ ವಕೀಲರೊಂದಿಗೆ ಬಂದ ಹೆಣ್ಣು – ಅವಳ ವಿಷಯದಲ್ಲಿ ಅತಿನಂಬಿಕೆ ಅಪ್ರಸ್ತುತವೆಂದೇ ಕಾಣುತ್ತದೆ."

ಮೆಹರ್‌ಬಾನುವಿನ ಬಗ್ಗೆ ಅತ್ಯಂತ ಅಭಿಮಾನವನ್ನು ಬೆಳಸಿಕೊಂಡ ನಾಯಕರಿಗೆ ಪರಶುರಾಮಪ್ಪನವರ ಮಾತು ಕೇಳಿ ವ್ಯಥೆಯಾಯಿತು; ವ್ಯಥೆಯಾದಷ್ಟೇ ಚಿಂತೆಯೂ ಆಯಿತು.

"ಅವರವರಿಗೆ ಪರಸ್ಪರ ಪರಿಚಯ ಸ್ನೇಹವಿದ್ದರೆ, ಆ ದಿನ ಸಂಗೀತ ಸಭೆಯಲ್ಲಿ ಮೆಹರ್‌ಬಾನು, ಜಾರ್ಜ ಸಾಹೇಬನನ್ನು ಅಪಮಾನಿಸಿದ್ದೇಕೆ?"

"ಅದು ನಮ್ಮನ್ನು ವಂಚಿಸಲು ಹೂಡಿದ ನಾಟಕವಿದ್ದರೂ ಇರಬಹುದು."

ಪರಶುರಾಮಪ್ಪನವರು ಹೇಳಿದುದನ್ನು ಕೇಳಿದ ಬಳಿಕ ನಾಯಕರಿಗೂ ಹಾಗಿರಬಹುದಾದುದು ಅಸಂಭವವೇನೂ ಅಲ್ಲವೆಂದೇ ತೋರಿ —

"ಹಾಗಿದ್ದರೆ, ಈಗೇನು ಮಾಡಬೇಕೆಂದು ನಿಮ್ಮ ಅಭಿಪ್ರಾಯ? ಜಾರ್ಜ ಸಾಹೇಬನನ್ನು ನಮ್ಮ ಸೇನೆಯೊಂದಿಗೆ ಹೋಗದಂತೆ ತಡೆಯಬೇಕೆ?"

—ಎಂದು ಕೇಳಿದರು.

"ಅದೇನೂ ಅಗತ್ಯವಿಲ್ಲ. ಆದರೆ 'ಆತನ ವಿಷಯದಲ್ಲಿ ಅತ್ಯಂತ ಎಚ್ಚರವಾಗಿರಬೇಕು. ಕೊಂಚ ಸಂಶಯ ಬಂದರೂ ಅವನನ್ನು ಕೂಡಲೇ ಸಂಹರಿಸಬೇಕು' ಎಂದು ನಮ್ಮವರಿಗೆ ಹುಷಾರು ಹೇಳಿ ಕಳಿಸಬೇಕು. ಜಾರ್ಜ ಸಾಹೇಬನಿಗೆ ನಮ್ಮ ಕೋಟೆಯ ವಿಷಯವೆಲ್ಲಾ ಚೆನ್ನಾಗಿ ತಿಳಿದಿದೆ. ಆದುದರಿಂದ ಯಾವುದೇ ಕಾರಣಕ್ಕಾಗಿಯಾದರೂ, ಕಣ್ಣುತಪ್ಪಿಸಿಕೊಂಡು ಹೋಗದಂತೆ ನೋಡಿಕೊಳ್ಳಬೇಕಾದುದು ಅತ್ಯಂತ ಅಗತ್ಯ. ಆತ ನಿಜವಾಗಿಯೂ ನಮ್ಮ ವೈರಿಯಾಗಿದ್ದು, ಕೈ ತಪ್ಪಿಸಿಕೊಂಡು ಹೋದರೆ, ದುರ್ಗಕ್ಕೆ ಅತ್ಯಂತ ಅಪಾಯ ಒದಗುತ್ತದೆ."

"ಅದು ಸರಿಯೆ. ಕೂಡಲೇ ಹೊಳಲಕೆರೆ ಬೊಮ್ಮಣ್ಣನವರನ್ನು ಕರೆಸಿಕೊಂಡು ಅವರಿಗೆ ಆ ಎಚ್ಚರಕೊಟ್ಟು ಕಳಿಸಿ."

"ಪ್ರಭುಗಳ ಕಿವಿಯ ಮೇಲೆ, ಇರುವ ವಿಷಯವನ್ನು ಹಾಕಿ ಬಳಿಕ ಆ ಕೆಲಸ ಮಾಡೋಣವೆಂದಿದ್ದೆ. ಈ ದಿನವೇ ಬೊಮ್ಮಣ್ಣನವರಿಗೆ ಆ ವಿಷಯ ತಿಳಿಸುತ್ತೇನೆ."

"ಆದಾಯಿತು – ಮೆಹರ್‌ಬಾನುವಿನ ವಿಷಯ ಏನು ಮಾಡುವುದು? ಈಗ ಆಕೆ ಏನು ಮಾಡಬಹುದೆಂದು ನಿಮ್ಮ ಊಹೆ?"

"ಜಾರ್ಜ ಸಾಹೇಬ ದುರ್ಗವನ್ನು ಬಿಟ್ಟ ಮೇಲೆ, ಆಕೆಯೂ ಏನಾದ

ರೊಂದು ನೆಪ ಮಾಡಿಕೊಂಡು, ಇಲ್ಲಿಂದ ಹೊರಡಲು ಪರವಾನಗಿ ಕೇಳ ಬಹುದು. ಏನೇ ಆದರೂ ಜಾರ್ಜ್ ಸಾಹೇಬ ಹಿಂದಿರುಗಿ ಬರುವವರೆಗೂ ಆಕೆಗೆ ಪರವಾನಗಿ ಕೊಡಬಾರದು."

"ಪರವಾನಗಿ, ರಹದಾರಿ ಬೇಕಾದರೆ ಆಕೆ ನಿಮ್ಮ ಬಳಿಯೇ ಬರಬೇಕಲ್ಲ. ನೀವೇ ಇಲ್ಲವೆಂದು ಬಿಡಿ."

"ನನ್ನ ಬಳಿ ಬಂದರೆ ಹಾಗೆ ಹೇಳಬೇಕೆಂದು ನಾನೇನೋ ನಿಶ್ಚಯ ಮಾಡಿದೇನೆ. ಆದರ ಆಕೆಗೆ ತಮ್ಮ ಪರಿಚಯ ಹೆಚ್ಚಾಗಿರುವುದರಿಂದ, ನೇರ ವಾಗಿ ನಿಮ್ಮಲ್ಲಿಗೇ ಬರಬಹುದು ಎಂಬ ಕಾರಣಕ್ಕಾಗಿ ಈ ಮಾತು ಹೇಳಿದೆ."

"ಅಂದರೆ-ಆಕೆ ನಮ್ಮನ್ನು ಕಾಣಲು ಬಂದರೆ ಆಕೆಯನ್ನು ನೋಡಲೂ ನಿರಾಕರಿಸಬೇಕೆಂದು ನಿಮ್ಮ ಅಭಿಪ್ರಾಯವೇ?"

"ಅದೇನೂ ಅಗತ್ಯವಿಲ್ಲ. ಆಕೆಗೆ ತಮ್ಮ ವಿಷಯದಲ್ಲಿ ಸಂಶಯ ಬರುವಂತೆ ನಡೆದುಕೊಳ್ಳಬೇಕಾಗಿಲ್ಲ. ಸಹಜವಾಗಿಯೇ ಇದ್ದಂತೆ ವರ್ತಿಸಿ ಆಕೆಯ ಅಂತರಂಗವನ್ನು ಭೇದಿಸಬೇಕು."

"ಆಯಿತು. ನಿಮಗೆ ಹೇಗೆ ಸೂಕ್ತವೋ ಹಾಗೆ ಮಾಡಿ. ನಾವು ಯಾವುದಕ್ಕೂ ಅಡ್ಡಿ ಬರುವುದಿಲ್ಲ. ಅಂತೂ ನಿಮ್ಮ ಎಚ್ಚರಿಕೆಯನ್ನು ಎಷ್ಟು ಕೊಂಡಾಡಿದರೂ ಸಾಲದು ಪರಶುರಾಮಪ್ಪನವರೇ, ನಿಮ್ಮ ಕಣ್ಣೇ ದುರ್ಗಕ್ಕೆ ಬಹು ಅಭೇದ್ಯವಾದ ಕೋಟೆ."

—ಎಂದು ಪರಶುರಾಮಪ್ಪನವರನ್ನು ಪ್ರಶಂಸಿಸಿ,

"ಮತ್ತೇನಾದರೂ ಹೇಳುವುದಿದೆಯೇ?"

—ಎಂದು ಕೇಳಿದರು.

"ಇನ್ನೇನೂ ಇಲ್ಲ. ಇವಿಷ್ಟು ವಿಷಯವನ್ನು ಮಾತ್ರ ಅರಿಕೆ ಮಾಡಿ ಕೊಂಡು ಅಪ್ಪಣೆ ಪಡೆಯುವುದಿತ್ತು. ಅದಕ್ಕಾಗಿಯೇ ನಿಂತೆ. ಇನ್ನು ಅಪ್ಪಣೆ ಯಾದರೆ ನಾನೂ ಹೊರಡುತ್ತೇನೆ"

"ಆಯಿತು – ಹೋಗಿಬನ್ನಿ."

—ಎಂದರು ನಾಯಕರು.

ನಾಯಕರಿಗೆ ಮುಜುರೆಯನ್ನು ಸಲ್ಲಿಸಿ ಪರಶುರಾಮಪ್ಪನವರು ಅಲ್ಲಿಂದ ಪೊರಟು ಹೋದರು. ಯುದ್ಧದ ಚಿಂತೆಯೊಂದಿಗೆ, ಈ ಹೊಸದೊಂದು ಚಿಂತೆಯನ್ನು ಹೊತ್ತು ನಾಯಕರು ಅಂತಃಪುರಕ್ಕೆ ತೆರಳಿದರು.

# ದೊಡ್ಡೇರಿಯ ಕಾಳಗ

೧

ಮರಾಟರ ದಾಳಿಯಿಂದ ಸೀರ್ಯದ ಸೀಮೆಯನ್ನು ರಕ್ಷಿಸುವ ಸಲು ವಾಗಿ, ಮರಾಟರ ಸೇನೆಯನ್ನು ಮಾರ್ಗದಲ್ಲೇ ಮಟ್ಟ ಹಾಕುವ ಸಲುವಾಗಿ, ತನ್ನ ಪ್ರಬಲ ಪಡೆಗಳೊಂದಿಗೆ ಬಂದ ಸೀರ್ಯದ ದಿವಾನ್ - ಫೌಜುದಾರ ಖಾಸಿಂಖಾನ್, ಹಿರಿಯೂರಿನಿಂದ ರಾಯದುರ್ಗಕ್ಕೆ ಹೋಗುವ ರಾಜ ಮಾರ್ಗದಲ್ಲಿದ್ದ ತಳಕಿನ ಕೋಟೆಯಲ್ಲಿ ತನ್ನ ಪಾಳಯವನ್ನು ಹೂಡಿದ್ದ.

ತಳಕು ಅಷ್ಟು ದೊಡ್ಡ ನಗರವೇನೂ ಅಲ್ಲ. ಅಲ್ಲಿಯ ಕೋಟೆ ಅಷ್ಟು ಬಲವಾದ ಕೋಟೆಯೂ ಅಲ್ಲ; ಸಾಮಾನ್ಯವಾದ ಮಣ್ಣಿನಿಂದ ನಿರ್ಮಿತವಾದ ಕೋಟೆ. ಆದರೆ, ತಳಕಿಗೆ ಬಹು ಸಮೀಪವಾಗಿ ಶಾಶ್ವತ ಜಲವಸತಿಯನ್ನುಳ್ಳ ದೊಡ್ಡ ಹಳ್ಳವೊಂದು ಹರಿಯುತ್ತಿದ್ದುದರಿಂದ, ದೊಡ್ಡ ಸೇನೆಗೆ ಅಗತ್ಯವಾದ ಹುಲ್ಲು, ನೀರುಗಳು ಸಾಕಷ್ಟು ದೊರಕುತ್ತದೆ ಎಂಬ ಕಾರಣದಿಂದ, ಖಾಸಿಂ ಖಾನ್ ಅಲ್ಲಿ ತನ್ನ ಸೇನಾಪಾಳಯವನ್ನು ನಿರ್ಮಿಸಿದ್ದ. ತನ್ನ ಸೇನೆಯ ಬಹು ಭಾಗವನ್ನು ಅಲ್ಲಿಯ ಪಾಳಯದಲ್ಲಿ ನೆಲೆಗೊಳಿಸಿ, ಆ ಮಾರ್ಗವಾಗಿಯೇ ಬರ ಬೇಕಾದ ಸಂತೋಜಿ ಘೋರ್ಪಡೆಯ ಸೇನೆಯ ಚಲನ - ವಲನದ ಮುನ್ಸೂ ಚನೆಯನ್ನು ತನಗೆ ಕೊಡಲು, ಬೊಮ್ಮಗೊಂಡನ ಹಳ್ಳಿಯ ಠಾಣ್ಯದಲ್ಲಿ ಮುಂಬಲವೊಂದನ್ನು ಕಳಿಸಿ, ತನ್ನ ನೆರವಿಗೆ ಚಿತ್ರದುರ್ಗದವರ ಸೇನೆ ಬರುವು ದನ್ನೇ ಕಾಯುತ್ತಿದ್ದ.

ತನ್ನ ಪತ್ರಕ್ಕೆ ಉತ್ತರವಾಗಿ ಚಿತ್ರದುರ್ಗದ ನಾಯಕರು ಸೇನಾ ಸಹಾ ಯದ ಭರವಸೆಯ ಪತ್ರವನ್ನು ಕಳಿಸಿ, ಒಂದು ವಾರವಾದರೂ ಅಲ್ಲಿಂದ ಸೇನೆ ಬರದಿದ್ದುದನ್ನು ಕಂಡು, ಚಳ್ಳಕೆರೆಯ ಕಡೆಯಿಂದ ದುರ್ಗದವರ ಸೇನೆ ಬರು ತ್ತಿರುವ ಸಮಾಚಾರವೂ ಬರದಿರುವುದನ್ನು ಕಂಡು, ಖಾಸಿಂಖಾನನ ಚಿಂತೆ ಬೆಳೆದು, ದಿನಗಳೆದಂತೆ ಬಲಿಯುತ್ತಿತ್ತು.

ಆ ಚಿಂತೆಯೊಂದಿಗೆ, ಕಳೆದ ಎರಡು ದಿನಗಳಿಂದ ಹೊಸದೊಂದು ಚಿಂತೆ ಬೆರೆತಿತ್ತು.

ತಾನು ಸೇನೆಯೊಂದಿಗೆ ಆ ಪ್ರಾಂತಕ್ಕೆ ಬಂದ ಅವಕಾಶವನ್ನೇ ಉಪಯೋಗಿಸಿಕೊಂಡು, ಖಾಸಿಂಖಾನ್, ಆ ಸೀಮೆಯ, ತನ್ನ ಪರಗಣೆಗೆ ಸೇರಿದ ಸಣ್ಣಪುಟ್ಟ ಪಾಳಯಗಾರರಿಗೆ, ಅವರಿಂದ ತನಗೆ ಸಲ್ಲಬೇಕಾದ ಪೊಗದಿಯ ಹಣವನ್ನು ಕೂಡಲೇ ತಂದು ಪಾವತಿ ಮಾಡುವಂತೆ ' ತಾಕೀತು ' ಕಳಿಸಿದ್ದ. ಸೇನೆಯೊಂದಿಗೆ ಬಂದ ಖಾನನಿಗೆ ನೆಪ ಹೇಳಲು ಹೆದರಿದ ಪಾಳಯಗಾರರು, ಅವನ ಅಪ್ಪಣೆಯಂತೆ, ಮೊಗಲ್ ಸುಬೇದಾರನಿಗೆ ತಾವು ಕೊಡಬೇಕಾದ ಪೊಗದಿಯ ಹಣವನ್ನು ತಂದೊಪ್ಪಿಸಿ, ಆ ಹಣ – ಸುಮಾರು ಮೂರುವರೆ ಲಕ್ಷ ರೂಪಾಯಿ – ಖಾನನ ಕೈಸೇರಿ, ಆ ಹಣವೂ ಅವನ ಪಾಳೆಯದ ಖಜಾನೆಯಲ್ಲಿದ್ದು, ಖಾಸಿಂಖಾನನಿಗೆ, ಮರಾಟರನ್ನು ಎದುರಿಸುವ ಯೋಚನೆಯೊಂದಿಗೆ, ಆ ಬೊಕ್ಕಸವನ್ನು ರಕ್ಷಿಸುವ ಯೋಚನೆಯೂ ಬೆರೆತಿತ್ತು.

ಖಾಸಿಂಖಾನನ ಸಲಹೆಗಾರನಾದ ಜುಲ್‌ಫಿಕಾರ್‌ಖಾನ್, ದಿಲಾವರ್ ಬಕ್ಷಿ, ಕಲೀಮುಲ್ಲಾಖಾನ್ ಮೊದಲಾದವರು, ದಿನವೂ ಖಾಸಿಂಖಾನನಿಗೆ ನಿತ್ಯಯುದ್ಧಭೀತಿಗ್ರಸ್ತವಾದ ಪಾಳಯದಲ್ಲಿ ಅಷ್ಟು ಅಗಾಧವಾದ ಸಂಪತ್ತನ್ನು ಇಟ್ಟುಕೊಳ್ಳದೆ, ಅದನ್ನು ಆದಷ್ಟು ಬೇಗ, ಸೀರ್ಯದ ಕಡೆ ಸಾಗಿಸಿಬಿಡಬೇಕೆಂದು ಸಲಹೆ ಮಾಡುತ್ತಿದ್ದರೂ, ಅವರ ಸಲಹೆ ಯುಕ್ತವಾದುದೆಂದು ಖಾಸಿಂಖಾನನಿಗೂ ತೋರಿದರೂ, ಆ ಬಗ್ಗೆ ಆತ ಒಂದು ಖಚಿತವಾದ ತೀರ್ಮಾನಕ್ಕೆ ಬರಲಾಗದೆ ತೊಳಲುತ್ತಿದ್ದ.

ತಾನು ಖುದ್ದಾಗಿ, ಆ ಬೊಕ್ಕಸದ ರಕ್ಷಣೆಯನ್ನು ಮಾಡಲಾಗದಿದ್ದ ಸಂದರ್ಭದಲ್ಲಿ, ಅದನ್ನು ಪರರ ರಕ್ಷಣೆಗೆ ಒಪ್ಪಿಸಿ ಕಳಿಸಿದ ಸಮಯದಲ್ಲೇ ಇತ್ತ ಮರಾಟರ ದಾಳಿ ನಡೆದರೆ, ಆ ಹೊತ್ತಿನಲ್ಲಿ ಹಣದ ರಕ್ಷಣೆಯ ಭಾರವನ್ನು ಹೊತ್ತವರು ಆ ಹಣದೊಂದಿಗೆ ಪಲಾಯನ ಮಾಡಿದರೆ, ಅಥವಾ ಮತ್ತಾರಾದರೂ, ಆ ಸಣ್ಣ ಸೇನೆಯ ಮೇಲೆ ಬಿದ್ದು ಲೂಟಿ ಮಾಡಿದರೆ ಏನುಗತಿ ಎಂಬ ಭೀತಿ ಖಾಸಿಂಖಾನನ ಅನಿಶ್ಚಯತೆಗೆ ಕಾರಣವಾಗಿತ್ತು.

ಆದುದರಿಂದಾಗಿಯೇ ಆತ, ತನ್ನ ಸಹಾಯಕ್ಕೆ ಚಿತ್ರದುರ್ಗದವರು ಬಂದಾಗ, ಅವರ ಸೇನೆಯನ್ನೇ ಮರಾಟರನ್ನು ಎದುರಿಸಲು ಮುಂದೆ ಬಿಟ್ಟು, ಅವರಿಂದ ದುರ್ಬಲಗೊಳಿಸಲ್ಪಟ್ಟ ಮರಾಟರ ಸೇನೆಯನ್ನು ಸದೆ ಬಡಿಯುವ

ಕೆಲಸವನ್ನು ತನ್ನ ಸೇನೆಗೆ ಒಪ್ಪಿಸಿ, ತಾನೇ ತನ್ನ ಆಪ್ತಬಲದ ರಕ್ಷಣೆಯಲ್ಲಿ, ಶ್ರೀಗದಿಯ ಹಣವನ್ನು ಸಿರಾಕ್ಕೆ ಸಾಗಿಸಬೇಕೆಂದು ಯೋಚನೆ ಮಾಡಿದ್ದ.

ಈ ಕಾರಣದಿಂದಾಗಿ ಚಿತ್ರದುರ್ಗದ ಸೇನೆ ಬರುವುದು ತಡವಾದುದರಿಂದ ಅವನ ಚಿಂತೆ ಮತ್ತಷ್ಟು ಹೆಚ್ಚಿತ್ತು.

ದಿನವಂತೆಯೇ, ಅಂದಿನ ಇರುಳೂ ಖಾಸಿಂಖಾನನ ಗುಡಾರದಲ್ಲಿ, ಅದೇ ವಿಷಯದ ಚರ್ಚೆ ನಡೆದಿತ್ತು.

"ಈ ದಿನವೂ ದುರ್ಗದವರ ಸುದ್ದಿಯಿಲ್ಲ. ಸೇನೆ ಕಳಿಸುತ್ತೇವೆ ಎಂದು ಬಂದ ರಾಯಸವೊಂದಲ್ಲದೆ, ಅವರಿಂದ ಬೇರೆಯ ಸಮಾಚಾರವೇ ಇಲ್ಲ. ಇದಕ್ಕೇನು ಕಾರಣವಿರಬಹುದು ಜುಲ್‌ಫಿಕಾರ್......."

—ದಾಸಿ ಸಜ್ಜುಗೊಳಿಸಿ ತಂದಿಟ್ಟು ಹೋದ ಹುಕ್ಕಾವನ್ನು ಸೇದಿ, ನಿಧಾನವಾಗಿ ಹೊಗೆ ಬಿಡುತ್ತಾ ಕೇಳಿದ ಖಾಸಿಂಖಾನ್.

"ಈ ವಿಷಯ ನಿಮ್ಮಷ್ಟೇ ನನಗೂ ಆಶ್ಚರ್ಯವನ್ನುಂಟು ಮಾಡಿದೆ ಸರ್ಕಾರ್. ಏನು ಕಾರಣಕ್ಕಾಗಿ ತಡವಾಗಿದೆಯೋ ಏನೋ, ಆದರೆ ದುರ್ಗದ ನಾಯಕರು, ಕೊಟ್ಟ ಮಾತಿಗೆ ತಪ್ಪಿ ನಡೆಯುವವರು ಎಂದು ನನಗೆ ತೋರುವುದಿಲ್ಲ."

—ಎಂದ ಜುಲ್‌ಫಿಕಾರ್ ಖಾನ್.

"ಈ ಹರಾಮುಖೋರ್, ಕಾಫಿರ್ ನಾಯಕನನ್ನು ಖಾವಿಂದರು ನಂಬುವುದೇ ತಪ್ಪು. ಮೊದಲಿನಿಂದಲೂ ನಾನು ಖಾವಿಂದರಿಗೆ ಹೇಳುತ್ತಲೇ ಇದ್ದೇನೆ; ಈ ಹಿಂದೂ ಜನ ಶುದ್ಧ ನಮಕ್‌ಹರಾಂ ಜನ. ನಮ್ಮ ನೆರಳು ಕಂಡರೆ ಅವರಿಗೆ ಆಗುವುದಿಲ್ಲ, ಎಂದಿದ್ದರೂ ಅವರು ನಮಗೆ ಶತ್ರುಗಳೇ ಹೊರತು, ಮಿತ್ರರಲ್ಲ. ನಮ್ಮ ವಕೀಲರಿಗೆ ಕಠಾರಿ ಉತ್ತರ ಕೊಟ್ಟ ಆ ಪುಂಡ ನಾಯಕ, ಈ ಮರಾಟರ ವಿರುದ್ಧ ನಮಗೆ 'ಮದತ್' ಮಾಡುತ್ತಾನೆಯೇ? ಹರಪನಹಳ್ಳಿ, ರಾಯದುರ್ಗದ ನಾಯಕರು ಮಾಡಿದುದನ್ನು ತಿಳಿದೂ, ಖಾವಿಂದರು, ಈ ದುರ್ಗದ ನಾಯಕರನ್ನು ನಂಬುತ್ತಿರುವುದು ನನಗೆ ಆಶ್ಚರ್ಯವಾಗಿದೆ ಈ ಜನಕ್ಕೆ ಜುಟ್ಟು ಕತ್ತರಿಸಿ, ಹಸುವಿನ ಮಾಂಸ ತಿನ್ನಿಸಿ, 'ಕಲ್ಮಾ' ಓದುವ ಹಾಗೆ ಮಾಡುವವರೆಗೂ ಇವರು ನಮಗೆ ಬಗ್ಗುವುದಿಲ್ಲ, ಅದೊಂದೇ ಈ ಮುಕ್ಕಳನ್ನು ಮಣಿಸಲು ದಾರಿ."

—ಕರ್ಕಶ ಕಠೋರತೆಯಿಂದ ಹೇಳಿದ ಕಲೀಮುಲ್ಲಾ ಖಾನ್.

"ಹಿಂದೂಗಳ ಹೆಸರು ಕೇಳಿದರೇ ನಿಮ್ಮ 'ಖೂನ್' (ರಕ್ತ) ಕುದಿಯುತ್ತದೆ ಎಂದು ನಾನು ಬಲ್ಲೆ ಕಲೀಮುಲ್ಲಾ ಖಾನ್. ಆದರೆ ಪ್ರಕೃತ ಸಮಯದಲ್ಲಿ ನಿಮ್ಮ ಧೋರಣೆ ಸರಿಯಲ್ಲವೆಂದು ನನಗೆ ತೋರುತ್ತದೆ. ಇಲ್ಲಿ ನಮಗೆ ಹಿಂದೂಜನ ಸಹಾಯ ಮಾಡದಿದ್ದರೆ, ದೆಹಲಿಯಿಂದ, ಬಿಜಾಪುರದಿಂದ ಸೇನೆಗಳು ಬಂದು ನಮ್ಮನ್ನು ಕಾಪಾಡುತ್ತವೆಯೇ? ಆದುದರಿಂದ, ನಿಮಗೆ ಹಿಂದೂಗಳನ್ನು ಪ್ರೀತಿಸಿ ಎಂದು ಹೇಳಲು ನನಗೆ ಅಧಿಕಾರವಿಲ್ಲವಾದರೂ, ನಿಮ್ಮ ದ್ವೇಷಭಾವನೆಯನ್ನು ಇಷ್ಟು ಬಹಿರಂಗವಾಗಿ ಪ್ರಕಟಿಸಬೇಡಿ ಎಂದು ಕೋರುತ್ತೇನೆ. ಅದರಿಂದ ನಮಗೆ ಸಹಾಯವಾಗುವುದಿಲ್ಲ."

—ಖಾಸಿಂಖಾನ್ ಹೇಳಿದ.

"ತಾವು ನನಗೆ ಮೇಲ್ಪಟ್ಟ ಅಧಿಕಾರಿಗಳು; ಸಾಕ್ಷಾತ್ ಆಲಂಗೀರ್ ಬಾದಶಹರ ಪ್ರತಿನಿಧಿಗಳು. ಆದುದರಿಂದ ನಾನು ಹೆಚ್ಚೇನೂ ಹೇಳುವುದಿಲ್ಲ ನನ್ನ ದೃಷ್ಟಿಯಲ್ಲೇನೋ ಕುರಾನ್ - ಖಾಜಿ - ಖಡ್ಗ ಇವೇ ನಮ್ಮ ಆಧಾರ ಸ್ತಂಭಗಳು, ಈ ಹಿಂದೂ ಮಿತ್ರರಲ್ಲ. ನನ್ನ ಮಾತು ನಿಜವಾಗುವುದೆಂಬುದನ್ನು ನೀವೇ ನೋಡುತ್ತೀರಿ. ಆಲಂಗೀರ್ ಬಾದಷಹರ ಇಸ್ಲಾಮೀ ಧೋರಣೆಯನ್ನು ನೀವು ಕಟ್ಟುನಿಟ್ಟಾಗಿ ಅನುಸರಿಸದಿರುವುದೇ ಈ ಸೀಮೆಯಲ್ಲಿ ನಿಮ್ಮ ಆಡಳಿತ ಸಡಿಲವಾಗುವುದಕ್ಕೆ ಕಾರಣ ಖಾವಿಂದ್. ಅಲ್ಲವೇ ದಿಲಾವರ್ ಬಕ್ಷಿಜೀ?"

—ತಾನು ಹಿಡಿದ ಪಟ್ಟನ್ನು ಕೊಂಚವೂ ಸಡಲಿಸದೆ ಹೇಳಿದ ಕಲೀಮುಲ್ಲಾ ಖಾನ್.

"ಹಿಂದೂಗಳನ್ನು ಗೌರವಿಸುವ ನನ್ನ ಆಡಳಿತ ರೀತಿ ನಿಮಗೆ ಸರಿಹೋಗಿಲ್ಲವೆಂದು ನಾನು ಬಲ್ಲೆ ಕಲೀಮುಲ್ಲಾ ಖಾನ್. ಆದರೆ ನಿಮ್ಮಂಥ ಮುಸ್ಲಿಂ ಸರದಾರರ ಧೋರಣೆಯೇ, ಈ ಮರಾಟಾ ಸರದಾರರಿಗೆ, ಹಿಂದೂ ಪಾಳೆಯಗಾರರು ಆಶ್ರಯ ಕೊಡಲು ಕಾರಣವಾಗಿದೆಯೆಂಬುದನ್ನು ಮರೆಯಬೇಡಿ. ಆ ಬಗ್ಗೆ ಈಗ ನಿಮ್ಮೊಂದಿಗೆ ಚರ್ಚಿಸಲು ನನಗೆ ಇಷ್ಟವಿಲ್ಲ. ಅಲ್ಲದೆ, ಇದು ಪರಸ್ಪರ ವಿರುದ್ಧ ಮತ ಪ್ರದರ್ಶನಕ್ಕೆ ಸಮಯವೂ ಅಲ್ಲ. ಈಗ ಒಂದು ವೇಳೆ ಚಿತ್ರದುರ್ಗದವರು ನಮಗೆ ನೆರವು ನೀಡದಿದ್ದರೆ, ಏನು ಮಾಡಬೇಕು ಎಂದು ಯೋಚಿಸುತ್ತೀರೋ, ಅಥವಾ ಈ ಮರಾಟರ ವಿರುದ್ಧ ಕುರಾನ್ ಹಿಡಿದ ಖಾಜಿಗಳನ್ನು ಕಳುಹಿಸುವ ಸಲಹೆ ಮಾಡುತ್ತೀರೋ?"

—ನವಿರಾದ ವ್ಯಂಗ್ಯ ಬೆರೆತ ಧ್ವನಿಯಲ್ಲಿ ಕೇಳಿದ ಖಾಸಿಂಖಾನ್.

ಖಾಸಿಂಖಾನ್ ಹೇಳಿದುದನ್ನು ಕೇಳಿ ಕಲೀಮುಲ್ಲಾಖಾನನ ಮುಖ ಕೆಂಪೇರಿತು.

ಅವರಿಬ್ಬರ ಅಪ್ರಿಯವಾದ ವಾದದಿಂದ ಗುಡಾರದಲ್ಲಿಯ ವಾತಾವರಣ ಬಿಸಿಯಾಗಿ, ಬಿಗಿತ ಮೂಡಿತು. ಆ ವಾದವನ್ನು ಹಾಗೇ ಬೆಳೆಯಗೊಟ್ಟರೆ, ಅದರಿಂದ ವಿಪರೀತ ಪರಿಣಾಮವಾಗಬಹುದೆಂದು ಹೆದರಿದ ದಿಲಾವರ್ ಬಕ್ಷ್—

"ಖಾವಂದರು ಕಲೀಮುಲ್ಲಾಖಾನರ ಮಾತನ್ನು ಅನ್ಯಥಾ ತಿಳಿಯಬಾರದು. ಇಲ್ಲಿಯ ಹಿಂದೂ ಜನ ನಮಗೆ ಹೆಜ್ಜೆಹೆಜ್ಜೆಗೂ ಕೊಡುತ್ತಿರುವ ಕಿರುಕುಳದಿಂದ ರೋಸಿ, ಅವರು ಹಾಗೆ ಹೇಳುತ್ತಿದ್ದಾರೆ. ಸಕಲರನ್ನು, ಸರ್ವ ಜಾತಿಯವರನ್ನು ಪಾಲಿಸಬೇಕಾದ ತಾವು ಸಮದರ್ಶಿಗಳಾಗಿರಬೇಕಾದುದೇ ಧರ್ಮ. ಆದುದರಿಂದ ಈಗ ಆ ಬಗ್ಗೆ ಚರ್ಚೆ ನಡೆಸುವುದು ನಿಷ್ಪ್ರಯೋಜಕ. ದುರ್ಗದವರು ನಮಗೆ ಸಹಾಯ ಕಳಿಸುತ್ತಾರೋ ಬಿಡುತ್ತಾರೋ – ಅದನ್ನು ನೆಚ್ಚಿ ಕುಳಿತುಕೊಳ್ಳುವ ಕಾಲ ಇದಲ್ಲವೆಂದೇ ನನ್ನ ಅಭಿಪ್ರಾಯ. ನಾವು ಸೀರ್ಯವನ್ನು ಬಿಡುವ ಮೊದಲೇ, ರಾಯದುರ್ಗದಿಂದ ಇತ್ತ ಕಡೆ ದಾಳಿ ಮಾಡಲು ಹೊರಟಿದ್ದಾನೆ ಎಂದು ತಿಳಿದುಬಂದ, ಸಂತೋಜಿ ಘೋರ್ಪಡೆಯ ಸೇನೆ, ನಾವಿಲ್ಲಿಗೆ ಬಂದು ಹತ್ತು ದಿನವಾದರೂ, ಇತ್ತಕಡೆ ಬರದಿರುವುದನ್ನು ನೋಡಿದರೆ, ನನಗೇನೋ ಇದರಲ್ಲಿ ಕುತಂತ್ರವಿರುವಂತೆ ತೋರುತ್ತದೆ. ಆದುದರಿಂದ ತಾವು ಆ ಬಗ್ಗೆ ಪರ್ಯಾಲೋಚಿಸಬೇಕು."

—ಎಂದು ಹೇಳಿ, ವಿಷಯವನ್ನು ಬೇರೆ ಕಡೆಗೆ ತಿರುಗಿಸಿದ.

"ಆ ಬಗ್ಗೆ ನಿಮ್ಮ ಅಭಿಪ್ರಾಯವೇನು ದಿಲಾವರ್ ಬಕ್ಷ್? ನಮಗೆ ರಾಯದುರ್ಗದಿಂದ ಬಂದ ವಾರ್ತೆಯೇ ಸುಳ್ಳಾಗಿದ್ದು ನಮ್ಮ ಸೇನೆಯನ್ನು ಸೀರ್ಯದಿಂದ ಇತ್ತ ಎಳೆಯುವುದರಲ್ಲಿ, ಬೇರೆ ಮಾರ್ಗದಿಂದ ಸೀರ್ಯದ ಮೇಲೆ ದಾಳಿ ಮಾಡುವ ದುರುದ್ದೇಶವೇನಾದರೂ ಇರಬಹುದೇ?"

—ಚಿಂತಾಕ್ರಾಂತನಾಗಿ ಕೇಳಿದ ಖಾಸಿಂಖಾನ್.

"ಈ ಸೈತಾನೀ ಮರಾಟರ ತಲೆಯಲ್ಲಿ ಏನು ಯೋಚನೆ ಇದೆ ಎಂದು ಹೇಳುವುದು ಬಹು ಕಷ್ಟ. ಒಂದು ವೇಳೆ, ಮರಾಟರ ಸೇನೆ ಈ ಮಾರ್ಗವಾಗಿ ಬರದೆ, ಬೇರೆ ಮಾರ್ಗವಾಗಿ ಬರುವ ಪ್ರಯತ್ನ ಮಾಡಿದರೆ, ಪಾವುಗಡ, ಮಧುಗಿರಿಯ ನಮ್ಮ ಸೇನೆಗಳು ಅವರನ್ನು ತಡೆಯುತ್ತವೆ. ಅಲ್ಲದೆ ಆ ಮಾರ್ಗ,

ಇಲ್ಲಿಯಷ್ಟು ಸುಲಭವಲ್ಲ. ಆದುದರಿಂದ ಸಂತೋಜಿ ಘೋರ್ಪಡೆಯ ಸೇನೆ ಎಂದಿದ್ದರೂ, ಪ್ರಬಲ ಪಾಳೆಯಗಾರರ ವಿರೋಧವಿಲ್ಲದ ಈ ಮಾರ್ಗದಲ್ಲೇ ಬರಬೇಕು. ಆದುದರಿಂದ ರಾಯದುರ್ಗದಿಂದ ಬಂದ ವಾರ್ತೆ ಸುಳ್ಳಲ್ಲವೆಂದೇ ನನ್ನ ನಂಬಿಕೆ. ಆದರೂ, ಅವರನ್ನು ಕಾಯುತ್ತಾ, ಇಷ್ಟು ದೊಡ್ಡ ಸೇನೆಯನ್ನು ಇಲ್ಲಿ ವೃಥಾ ಬಿಡಾರ ಮಾಡಿಸುವುದು ಅಪಾಯಕಾರಿ ಎಂದು ನಮ್ಮ ಅಭಿಪ್ರಾಯ. ಇಲ್ಲಿಯದು ಮೊದಲೇ ಬೆಂಗಾಡು ಪ್ರಾಂತ. ಈ ಸೀಮೆಗೆ ಇಷ್ಟು ದೊಡ್ಡ ಸೇನೆಯನ್ನು ಸಾಕುವ ಶಕ್ತಿಯಿಲ್ಲ. ಇದಕ್ಕಿಂತಲೂ ಹೆಚ್ಚಾಗಿ ಖಾವಂದರು, ತಮ್ಮ ಬಳಿ ಸಂಗ್ರಹವಾಗಿರುವ ಹಣದ ಯೋಚನೆ ಮಾಡಬೇಕು. ಈ ಮರಾಟರು ಇಲ್ಲಿಗೆ ರಾಜ್ಯ ಕಟ್ಟಲು ಬಂದವರಲ್ಲ; ಅವರು ಬಂದಿರುವುದೇ ಲೂಟಿ, ದರೋಡೆಗೆ. ಇದೆಲ್ಲವನ್ನೂ ಗಮನಿಸಿ, ಖಾವಂದರು, ಕೂಡಲೇ ಏನಾದರೊಂದು ಕಾರ್ಯಕ್ರಮದ ಬಗ್ಗೆ ಇತ್ಯರ್ಥ ಮಾಡಬೇಕು."

"ನೀವು ಹೇಳಿದ ಮಾತುಗಳ ಬಗ್ಗೆ ನನ್ನ ಸಂಪೂರ್ಣ ಸಮ್ಮತಿ ಇದೆ ದಿಲಾವರ್ ಬಕ್ಷ್. ಆದರೆ ಏನು ಮಾಡಬೇಕೆಂದೇ ತೋಚದಾಗಿದೆ. ನಿಮಗೆ ಏನಾದರೂ ಉಪಾಯ ಹೊಳೆದಿದ್ದರೆ — ಹೇಳಿ."

— ಖಾಸಿಂಖಾನ್ ದಿಲಾವರ್ ಬಕ್ಷನನ್ನೇ ಕೇಳಿದ.

"ನನ್ನದೂ ಒಂದು ಯೋಚನೆಯಿದೆ ಜಹಾಪನಾ ..."

— ಅಷ್ಟುಹೊತ್ತೂ ಸುಮ್ಮನೆ ಕುಳಿತಿದ್ದ ಕಲೀಮುಲ್ಲಾಖಾನ್ ಹೇಳಿದ.

"ಏನು ಹೇಳಿ."

"ನಾವು ನಮ್ಮ ಸೇನೆಯನ್ನು ಇಲ್ಲಿ ಕೂಡಿಸಿ ಮೇಯಿಸುವುದಕ್ಕಿಂತ ನೇರವಾಗಿ ರಾಯದುರ್ಗದ ಕಡೆಗೇ ನಡೆಸೋಣ. ಮಾರ್ಗದಲ್ಲಿ ಸಂತೋಜಿಯ ಸೈನ್ಯ ಎದುರಾದರೆ ಅಲ್ಲೇ ಲಡಾಯಿ ಮಾಡಬಹುದು. ನೀವು ಬೊಕ್ಕಸದೊಂದಿಗೆ ಶಿರಾಕ್ಕೆ ಹಿಂದಿರುಗಿ."

"ಆ ಯೋಚನೆ ನನಗೂ ಬಂದಿರಲಿಲ್ಲ, ಕಲೀಮುಲ್ಲಾಖಾನ್. ಆದರೆ ಇಲ್ಲಿಂದ ನಾವು ಮುಂದೆ ಹೋದರೆ ಅದರಿಂದ ನಮಗೆ ಅನುಕೂಲವಿಲ್ಲ."

"ಏಕೆ?"

"ಇಲ್ಲಿಯದು ಬಯಲುಸೀಮೆ. ಶತ್ರು ಯಾವ ಕಡೆಯಿಂದ ಬಂದರೂ ಅದು ತಿಳಿಯುತ್ತದೆ. ಆದರೆ ನಮ್ಮ ಸೇನೆ ಬೊಮ್ಮಗೊಂಡನ ಹಳ್ಳಿಯ ಕಾಡುಗಳಲ್ಲಾಗಲಿ, ಮೊಳಕಾಲ್ಮುರುವಿನ ಕಡೆಯ ಗುಡ್ಡಗಳಲ್ಲಾಗಲಿ ಸಿಕ್ಕಿ

ಬಿದ್ದರೆ, ಆಗ ಮರಾಟರಿಗೆ ನಮ್ಮನ್ನು ಹಣಿಯಲು ಅನುಕೂಲವಾಗುತ್ತದೆ. ನನಗೇನೋ ಸಂತೋಜಿ, ನಾವು ಆ ಕೆಲಸ ಮಾಡುವುದನ್ನೇ ಕಾಯುತ್ತಿದ್ದಾನೇನೋ ಎನಿಸುತ್ತದೆ. ಆದಕ್ಕಾಗಿಯೇ ಇಲ್ಲಿಯೇ ನಾನು ಕುಳಿತಿದ್ದೇನೆ."

—ಕಲೀಮುಲ್ಲಾ ಖಾನನ ಮಾತನ್ನು ಒಪ್ಪದೆ ಹೇಳಿದ ಖಾಸಿಂಖಾನ್.

"ಹಾಗಲ್ಲವೆ ನಾವಿಷ್ಟು ಭಾರಿ ಸೇನೆಯೊಂದಿಗೆ ಬಂದುದನ್ನು ಕಂಡು, ಸಂತೋಜಿ ದಾಳಿಯ ಯೋಚನೆಯನ್ನೇ ಕೈ ಬಿಟ್ಟಿರಬಹುದೇ?"

—ಅವರ ಮಾತಿನ ನಡುವೆ ಬೆರೆತು ಜುಲ್‌ಫಿಕಾರ್ ಖಾನ್ ಹೇಳಿದ.

ಅವನು ಮಾತನ್ನು ಆಡುತ್ತಿರುವಾಗಲೇ, ಇದ್ದಕ್ಕಿದ್ದ ಹಾಗೆ ಗುಡಾರದ ಹೊರಗೆ ಗದ್ದಲವಾಗಿ, ಅನಿರೀಕ್ಷಿತ ಗದ್ದಲವನ್ನು ಕೇಳಿದ ಖಾಸಿಂಖಾನ್, ಮಿಂಚು ಸೋಕಿದವನಂತೆ ಎದ್ದುನಿಂತು —

"ಜುಲ್‌ಫಿಕಾರ್, ಅದೇನು ಗದ್ದಲವೋ ನೋಡು"

—ಎಂದು ಕೂಗಿದ

ಆತನ ಮಾತು ಕೇಳಿದ ಜುಲ್‌ಫಿಕಾರ್‌ಖಾನ್ ಗಡಬಡಿಸಿಕೊಂಡು ಮೇಲೇಳುವುದರೊಳಗಾಗಿ, ಗುಡಾರದ ರಕ್ಷಕರು ಹೊರಗಿನಿಂದ ಸೈನಿಕನೋರ್ವನನ್ನು ಒಳಗೆ ತಂದು ನಿಲ್ಲಿಸಿದರು. ನಖಶಿಖಾಂತವಾಗಿ ರಕ್ತದಲ್ಲಿ ತೊಯ್ದು, ಗಾಯಗೊಂಡ ಆ ಸೈನಿಕ, ಬೊಮ್ಮಗೊಂಡನ ಹಳ್ಳಿಯ ಠಾಣ್ಯದ ಫೌಜುದಾರನೆಂಬುದನ್ನು ಗಮನಿಸಿದ ಖಾಸಿಂಖಾನ್ —

"ಅಕ್ಬರ್ ಅಲ್ಲೀ — ಇದೇನು ಏನಾಯಿತು? ಏನು ಸುದ್ದಿ?"

—ಎಂದು ಅವನ ಮೇಲೆ ಪ್ರಶ್ನೆಗಳ ಸುರಿಮಳೆಯನ್ನೇ ಕರೆದ.

"ಘಾತವಾಯಿತು ಖಾವಿಂದ್, ಬೊಮ್ಮಗೊಂಡನ ಹಳ್ಳಿಯ ಠಾಣ್ಯ ಮರಾಟರ ಕೈ ಸೇರಿತು. ಆ ಸೇನೆ ಇತ್ತ ಕಡೆಯೇ ಬರುತ್ತಿದೆ. ಅದನ್ನು ತಿಳಿಸಲೆಂದೇ ಬಂದೆ...."

—ಎಂದು ಅಷ್ಟು ಹೇಳಿ, ಆ ಮಾತು ಆಡಿದ ಆಯಾಸಕ್ಕೆಂಬಂತೆ ಅಕ್ಬರ್ ಅಲ್ಲೀ ಮೂರ್ಛೆಬಿದ್ದ.

ಅವನು ಹೇಳಿದುದನ್ನು ಕೇಳಿದ ಖಾಸಿಂಖಾನ್, ಪ್ರಜ್ಞೆ ತಪ್ಪಿ ನೆಲಕ್ಕುರುಳಿದ ಅಕ್ಬರ್ ಅಲ್ಲಿಯ ಕಡೆಗೂ ನೋಡದೆ—

"ಕಲೀಮುಲ್ಲಾ ಖಾನ್....ದಿಲಾವರ್ ಬಕ್ಷ್....ಕೂಡಲೇ ಸೇನೆಗೆ ಲಡಾಯಿಗೆ ಸಿದ್ಧವಾಗುವ ಹಾಗೆ ಹೇಳಿ. ಎಲ್ಲಿ ಹೋದರೂ ಆ ಸೈತಾನರು

ಕತ್ತಲಿನಲ್ಲೇ ದಾಳಿ ಮಾಡುತ್ತಾರೆ....ಬಹು ಬೇಗ ಸೇನೆ ಸಿದ್ಧವಾಗಬೇಕು”

—ಎಂದು ಅರಚಿ ಹೇಳಿದ.

ಖಾಸಿಂಖಾನ್ ಅಷ್ಟು ಹೇಳುತ್ತಿದ್ದ ಹಾಗೇ, ದಿಲಾವರ್ ಬಕ್ಷ್, ಕಲೀಮುಲ್ಲಾಖಾನ್, ಇಬ್ಬರೂ ಬಂದೂಕಿನಿಂದ ಉಡಾಯಿಸಿದ ಗುಂಡಿನಂತೆ, ಗುಡಾರದಿಂದ ಹೊರಗೆ, ತಮ್ಮ ದಳಪತಿಗಳ ಹೆಸರುಹಿಡಿದು ಕೂಗುತ್ತಾ ಓಡಿದರು. ಗುಡಾರದ ಹೊರಗೆ, ಅವರ ಕೂಗು ಕೇಳುತ್ತಿದ್ದ ಹಾಗೇ, ಅದುವರೆಗೂ ಇರುಳಿನ ಗಾಢ ನಿಶ್ಶಬ್ದತೆಯಲ್ಲಿದ್ದ ಪಾಳಯದೊಳಗೆ, ಹತ್ತಾರು, ಸೈನಿಕರನ್ನು ಎಚ್ಚರಿಸುವ ಕಹಳೆ - ಕೊಂಬುಗಳ ಮೊರೆತ ಕೇಳಿ ಬಂದು, ಇದ್ದಕ್ಕಿದ್ದ ಹಾಗೇ ಎಚ್ಚರಗೊಂಡ ಪಾಳಯದ ಬಗೆಬಗೆಯ ಶಬ್ದಗಳಿಂದ ಇರುಳು ಕಿಕ್ಕಿರಿಯಿತು.

ಎಚ್ಚರಗೊಂಡ ಪಾಳಯದ ಸದ್ದನ್ನು ಕೇಳಿ, ಖಾಸಿಂಖಾನನ ಉದ್ವಿಗ್ನ ಚಿತ್ತ ಕೊಂಚ ಶಾಂತವಾಗಿ ತನ್ನ ಅಪ್ಪಣೆಯನ್ನೇ ಇದಿರು ನೋಡುತ್ತಾ ನಿಂತಿದ್ದ ಜುಲ್‌ಫಿಕಾರ್ ಖಾನನ ಕಡೆ ತಿರುಗಿ—

“ಜುಲ್‌ಫಿಕಾರ್........ನೀನು ಈಗಿಂದೀಗಲೇ ದುರ್ಗಕ್ಕೆ ಹೋಗಿ, ಅಲ್ಲಿಯ ಸೇನೆಯನ್ನು ಹೊರಡಿಸಿಕೊಂಡು ಬಾ. ನಾಳೆ ಮಧ್ಯಾಹ್ನದ ವೇಳೆಗೆ ನಿನ್ನಿಂದ ಸುದ್ದಿ ಬರಬೇಕು.

—ಎಂದು ಅಪ್ಪಣೆ ಮಾಡಿದ.

“ಜೀ, ಹುಜೂರ್”

—ಎಂದು ಜುಲ್‌ಫಿಕಾರ್ ಖಾನ್, ಆ ಅಪ್ಪಣೆಯನ್ನು ನೆರವೇರಿಸಲು ತೆರಳಿದ.

ಜುಲ್‌ಫಿಕಾರ್ ಖಾನನೂ ಹೊರಟು ಹೋದ ಬಳಿಕ, ಖಾಸಿಂಖಾನ್, ಗುಡಾರದ ಒಳಗೆ, ತನ್ನ ಖಾಸಾ ಅಂಗರಕ್ಷಕ ಪಡೆಯ ನಾಯಕನಾದ ಹಮೀದುಲ್ಲಾಬೇಗನನ್ನು ಕರೆ ಕಳುಹಿಸಿ, ಅರೆನಿದ್ದೆಯಲ್ಲಿ ಎದ್ದು ಬಂದ ಅವನಿಗೆ ಆಗಿಂದಾಗಲೇ, ಅಲ್ಲಿಂದ ಬೊಕ್ಕಸವನ್ನು ಸಾಗಿಸಲು ಬೇಕಾದ ಏರ್ಪಾಡು ಮಾಡುವಂತೆ ಅಪ್ಪಣೆಮಾಡಿದ.

ಅವಸರದಲ್ಲಿ ಮಾಡಬೇಕಾದ ಅಪ್ಪಣೆಗಳನ್ನು ಮಾಡಿ, ಆ ಉದ್ವಿಗ್ನತೆಯಲ್ಲಿ ಒಣಗಿದ ಗಂಟಲನ್ನು ತೇವ ಮಾಡಿಕೊಳ್ಳಲು, ಸನಿಹದಲ್ಲಿದ್ದ ಪಾನ ಪಾತ್ರೆಯಿಂದ ಎರಡು ಗುಟುಕು ದ್ರಾಕ್ಷಾರಸವನ್ನು ಕುಡಿಯುತ್ತಿದ್ದ ಹಾಗೇ,

"ಇದೇನು ಹೀಗೆ, ಈ ಅಪವೇಳೆಯಲ್ಲಿ ಬಂದಿರಿ ? ಏನು ಸಮಾಚಾರ ?"
—ಎಂದು ಕೇಳಿದರು.

"ಈಗ ಏನು ವಿವರಿಸುವುದಕ್ಕೂ ಹೊತ್ತಿಲ್ಲ. ಕೂಡಲೇ ರಾಜಾ ಸಾಹೇಬರ ಭೇಟಿ ಮಾಡಿಸಿ."

—ಎಂದ ಜುಲ್‌ಫಿಕಾರ್ ಖಾನ್ ಉಸಿರು ಹೊಯ್ಯುವುದಕ್ಕೂ ಬಿಡುವು ಇಲ್ಲದವನಂತೆ.

"ನೀವು ತುಂಬಾ ದಣಿದ ಹಾಗಿದೆ. ಕೊಂಚ ವಿಶ್ರಾಂತಿ ತೆಗೆದುಕೊಳ್ಳಿ. ನಾನೂ ಈಗಿಂದೀಗಲೇ ಆಳನ್ನು ಕಳುಹಿಸಿ ಪ್ರಭುಗಳ ಸಮಯ ಹೇಗಿದೆಯೋ ತಿಳಿದುಕೊಳ್ಳುತ್ತೇನೆ."

—ಎಂದರು ಪರಶುರಾಮಪ್ಪ.

"ಈಗ ಆ ರೀತಿ-ರಿವಾಜುಗಳನ್ನು ಗಮನಿಸಲು ವೇಳೆಯಿಲ್ಲ, ದಿವಾನ್ ಸಾಹೇಬ್. ಈ ರಾತ್ರಿ ಇದ್ದಕ್ಕಿದ್ದ ಹಾಗೇ ಮರಾಠರ ಸೇನೆ ನಮ್ಮ ಮೇಲೆ ದಾಳಿ ಮಾಡಿತು. ರಾಜಾಸಾಹೇಬರು ನಮಗೆ ಕೊಟ್ಟಿದ್ದ ಸೇನಾ ಸಹಾಯದ ವಿಷಯ ಏನು ಮಾಡಿದಿರೋ ತಿಳಿದುಕೊಂಡು ಬರಬೇಕೆಂದು ದಿವಾನ್-ಫೌಜುದಾರರು ನನ್ನನ್ನಿಲ್ಲಿಗೆ ಅಟ್ಟಿದಾರೆ. ಅವರ ಉತ್ತರವನ್ನು ಕೂಡಲೇ ತಿಳಿದು, ನಾನು ತಳಕಿಗೆ ಹಿಂತಿರುಗಬೇಕು. ಆದುದರಿಂದ ಆಳನ್ನು ಕಳಿಸಿ ವೇಳೆ ವ್ಯರ್ಥಮಾಡಬೇಕಾದದ್ದಿಲ್ಲ. ನೀವೇ ನನ್ನ ಜೊತೆಯಲ್ಲಿ ಅರಮನೆಯ ವರೆಗೂ ಬಂದರೆ, ಕೂಡಲೇ ಅವರನ್ನು ಕಂಡು, ಅವರ ಉತ್ತರ ಪಡೆದು ಹಿಂತಿರುಗುತ್ತೇನೆ."

—ಎಂದು ಬೇಡಿದ ಜುಲ್‌ಫಿಕಾರ್ ಖಾನ್.

ಆ ಅವಸರದ ಬೇಡಿಕೆಗೆ ಇಲ್ಲವೆಂದು ಹೇಳಲಾಗದೆ, ಪರಶುರಾಮಪ್ಪ ನವರು ಅವಸರದಲ್ಲಿ ಉಡಿಗೆ ಧರಿಸಿ, ತಾವೂ ಕುದುರೆಯನ್ನೇರಿ, ಜುಲ್ ಫಿಕಾರ್ ಖಾನನೊಂದಿಗೆ ಅರಮನೆಗೆ ಹೊರಟರು.

ನಾಯಕರು ಕೂಡಲೇ ಭೇಟಿ ಕೊಟ್ಟು, ಜುಲ್‌ಫಿಕಾರ್ ಖಾನ್ ಹೇಳಿ ದುದನ್ನೆಲ್ಲ ಕೇಳಿ—

"ನಾವೂ ನಿಮಗೆ ಸೇನೆಯನ್ನು ಕಳುಹಿಸುವ ಸಿದ್ಧತೆಯಲ್ಲೇ ಇದ್ದೆವು. ಸೈನ್ಯ ಜಮಾವಣೆ ಮಾಡುವುದರಲ್ಲಿ ಕೊಂಚ ತಡವಾದುದರಿಂದ ಇಷ್ಟು ನಿಧಾನ ವಾಯಿತು. ನಾವೂ ಮರಾಟರು ನಿಮ್ಮ ಮೇಲೆ ಇಷ್ಟು ಬೇಗ, ಇಷ್ಟು

ಅನಿರೀಕ್ಷಿತವಾಗಿ ಹಲ್ಲಾ ಮಾಡಬಹುದೆಂದು ಊಹಿಸಿರಲಿಲ್ಲ. ಆಯಿತು - ಇಂದೇ ನನ್ನ ಸೇನೆಯನ್ನು ಹೊರಡಿಸುತ್ತೇವೆ. ಇನತ್ತು ರಾತ್ರಿ. ಹೆಚ್ಚೆಂದರೆ ನಾಳೆ ಪ್ರಾತಃಕಾಲದ ವೇಳೆಗೆ ನನ್ನ ಸೇನೆಗಳ ಮುಂಚೂಣಿಗಳು ತಳುಕನ್ನು ತಲುಪುತ್ತವೆ. ಈ ವಾರ್ತೆಯನ್ನು ನೀವು ನಂಬಿಕೆಯಿಂದ ತಿಳಿಸಿ."

—ಎಂದು ಭರವಸೆ ಕೊಟ್ಟು, ಪ್ರಧಾನಿಗಳಿಗೆ—

"ಕೂಡಲೇ ನನ್ನ ಸೇನೆಗಳು ಹೊರಡಲು ಸಿದ್ಧವಾಗಬೇಕೆಂದು ಫೌಜದಾರ್ ಬೊಮ್ಮಣ್ಣನವರಿಗೆ ಹೇಳಿಕಳುಹಿಸಿ."

—ಎಂದು ಹೇಳಿದ ಬಳಿಕ, ಜುಲ್ಫಿಕಾರ್ ಖಾನನ ಜೀವಕ್ಕೆ ಕೊಂಚ ನೆಮ್ಮದಿಯಾಯಿತು.

ಬಂದ ಕೆಲಸವನ್ನು ಮುಗಿಸಿಕೊಂಡು, ಅರಮನೆಯಿಂದ ಹಿಂತಿರುಗುತ್ತಿರುವಾಗ, ಜುಲ್ಫಿಕಾರ್ ಖಾನನಿಗೆ ಮೆಹರ್ ಬಾನುವಿನ ನೆನಪಾಗಿ—

"ಅಂದಹಾಗೆ - ನಿಮ್ಮನ್ನೊಂದ ಮಾತು ಕೇಳುವುದಿತ್ತು........"—ಎಂದ.

"ಏನು ?"

"ನಮ್ಮೊಂದಿಗೆ ರಾಜಾಸಾಹೇಬರ ದರಬಾರಿಗೆ ಗಾಯಕಿಯೊಬ್ಬರು ಬಂದಿದ್ದರಲ್ಲಾ............ಅವರು ಇಲ್ಲೇ ಇದ್ದಾರೆಯೋ, ಅಥವಾ ಇಲ್ಲಿಂದ ಹೊರಟು ಹೋದರೋ ?"

"ಇಲ್ಲಿಯೇ ಇದ್ದಾರೆ."

"ಇನ್ನೂ ಇಲ್ಲಿಯೇ ಇದ್ದಾರೆಯೇ? ನಮಗೆ, ಇಲ್ಲಿಯ ಬೈಠಕ್ ಮುಗಿದ ಬಳಿಕ ಕೆಳದಿಗೆ ಹೋಗುತ್ತೇನೆ ಎಂದು ಹೇಳಿದ್ದರಲ್ಲಾ........"

"ಅದೇನೋ ನಮಗೆ ತಿಳಿಯದು, ಅಂತೂ ಅವರೇನೋ ಇಲ್ಲಿಯೇ ಇದ್ದಾರೆ"

"ಅರಮನೆಯಲ್ಲಿ ಅವರ ಬೈಠಕ್ ಆಯಿತೇ ?"

"ಆಯಿತು."

"ಹಾಗಿದ್ದರೆ, ಅವರ ಗಾಯನ ಕೌಶಲ್ಯಕ್ಕೆ ಮೆಚ್ಚಿದ ರಾಜಾಸಾಹೇಬರೇ ಅವರನ್ನು ಇಲ್ಲಿ ನಿಲ್ಲಿಸಿಕೊಂಡಿರಬೇಕು."

"ಅದೇನೋ - ಆ ವಿಷಯ ನಮಗೆ ತಿಳಿಯದು."

—ಜಡವಾದ ಧ್ವನಿಯಲ್ಲಿ ಹೇಳಿದರು ಪರಶುರಾಮಪ್ಪ.

ತಾನು ಮೆಹರ್ ಬಾನುವಿನ ಬಗ್ಗೆ ಮಾಡಿದ ಪ್ರಶ್ನೆಗಳಿಗೆ, ಪರಶುರಾಮಪ್ಪ ಕೊಟ್ಟ ಉತ್ತರದ ನಿರ್ಜೀವ ರೀತಿಯನ್ನು ಕಂಡು, ಯಾವುದೋ ಕಾರಣಕ್ಕಾಗಿ ಪರಶುರಾಮಪ್ಪನವರು ಆಕೆಯ ಬಗ್ಗೆ ಅಸಂತುಷ್ಟರಾಗಿರಬಹುದೆಂದು ತೋರಿ, ಆಕೆಯ ಬಗ್ಗೆ ತಾನು ಅವರನ್ನು ಪ್ರಶ್ನಿಸಿದುದೇ ತಪ್ಪಾಯಿತೇನೋ ಎಂದೆನಿಸಿತು. ಆದರೂ ಆ ಅನಿಸುವಿಕೆಯಿಂದ ಉಂಟಾದ ಮೆಹರ್‌ಬಾನುವಿನ ಕ್ಷೇಮಚಿಂತನೆಯ ಕಾತುರ, ತನ್ನ ಕುತೂಹಲ – ಎರಡನ್ನೂ ತಡೆ ಹಿಡಿಯಲಾಗದೆ ಮತ್ತೆ ಪ್ರಶ್ನೆ ಮಾಡಿದ—

"ಬಾನು ಸಾಹಿಬಾ ಕ್ಷೇಮವಾಗಿದ್ದಾರೆಯೇ?"

"ಇರಬೇಕು."

"ಅಂದರೆ – ಈಚೆಗೆ ನೀವು ಅವರನ್ನು ಕಂಡಿರಲಿಲ್ಲವೇ?'

"ಕಾಣಬೇಕಾದ ಸಂದರ್ಭ ಒದಗಿ ಬರಲಿಲ್ಲ."

"ಈಗ ಅವರ ಬಿಡಾರವೆಲ್ಲಿ?"

"ಮೊದಲು ಬಂದಾಗ ಎಲ್ಲಿದ್ದರೋ, ಅಂದರೆ ನಿಮಗೆ ಕೊಟ್ಟ ವಸತಿ ಗೃಹದಲ್ಲಿಯೇ ಇದಾರೆ...."

—ಎಂದು ಒಂದು ಕ್ಷಣ ಕಾಲ ಸುಮ್ಮನಿದ್ದು, ತಟಕ್ಕನೆ ಏನೋ ಯೋಚಿಸಿ ಕೇಳಿದರು ಪರಶುರಾಮಪ್ಪ —

"ಇಷ್ಟೆಲ್ಲಾ ನಮ್ಮನ್ನು ಕೇಳುವುದೇಕೆ ಖಾನ್ ಸಾಹೇಬ್? ಅವರ ವಿಷಯವೆಲ್ಲಾ ನಮಗಿಂತಲೂ ನಿಮಗೇ ಚೆನ್ನಾಗಿ ಗೊತ್ತಿರಬೇಕಲ್ಲವೇ?"

ಬಹು ಮೊನೆಯಾಗಿ, ಬಹು ಅನಿರೀಕ್ಷಿತವಾಗಿ ಪರಶುರಾಮಪ್ಪನವರು ತನ್ನನ್ನು ಕೇಳಿದ ಪ್ರಶ್ನೆಯನ್ನು ಕೇಳಿ ಜುಲ್ಫಿಕಾರ್ ಖಾನ್ ದಿಗ್ಭ್ರಾಂತನಾಗಿ—

"ನಿಮ್ಮ........ನಿಮ್ಮ........ಮಾತಿನ ಅರ್ಥವೇ ನನಗಾಗುತ್ತಿಲ್ಲ ಪ್ರಧಾನೀಜೀ...."

—ಎಂದು ತೊದಲಿದ.

"ಚಿಂತೆಯಿಲ್ಲ. ಬಹಳ ಚೆನ್ನಾಗಿಯೇ ನಾಟಕ ಕಟ್ಟುತ್ತಿದ್ದೀರಿ."

—ಒಣನಗೆ ನಕ್ಕು ಹೇಳಿದರು ಪರಶುರಾಮಪ್ಪನವರು.

"ನಾಟಕ ...ನಾನು ನಾಟಕ ಕಟ್ಟುತ್ತಿದ್ದೇನೆಯೇ...."

"ಮತ್ತೇನು ಹೇಳಲಿ....ಅವರ ಯೋಗಕ್ಷೇಮವನ್ನು ನೋಡಿಕೊಳ್ಳಲು ನಿಮ್ಮವರೇ ಒಬ್ಬರು ಇಲ್ಲಿರುವಾಗ, ಅವರನ್ನು ಕೇಳುವುದು ಬಿಟ್ಟು, ಏನೂ ತಿಳಿಯದವರ ಹಾಗೆ ನಮ್ಮನ್ನು ಬಾನುಸಾಹಿಬಾ ವಿಷಯದಲ್ಲಿ ಪ್ರಶ್ನಿಸಿದರೆ, ಅದನ್ನು ನಾಟಕ ಎನ್ನದೆ ಮತ್ತೇನು ಹೇಳಲಿ?"

ಪರಶುರಾಮಪ್ಪನವರು ಆಡಿದ ಆ ಮಾತಿನಿಂದ ಜುಲ್‌ಫಿಕಾರ್ ಖಾನನ ದಿಗ್ಭ್ರಾಂತಿ ಮತ್ತಷ್ಟು ಬಲಿಯಿತು.

"ನೀವು ಹೇಳುತ್ತಿರುವ ಮಾತೊಂದೂ ನನಗೆ ಅರ್ಥವಾಗುತ್ತಿಲ್ಲ ಪ್ರಧಾನಿಜೀ....ಮೆಹರ್‌ಬಾನುವನ್ನು ಯಾರು ನೋಡಿಕೊಳ್ಳುತ್ತಿದ್ದಾರೆ?"

—ವಿಹ್ವಲತೆ ತುಂಬಿ ತುಳುಕುವ ಧ್ವನಿಯಲ್ಲಿ ಬೇಡಿದ ಜುಲ್‌ಫಿಕಾರ್ ಖಾನ್.

"ಜಾರ್ಜ ಡ್ಯುಪ್ರೋರೋ ನಿಮ್ಮ ಮನುಷ್ಯನೇ ಅಲ್ಲವೇ?"

—ತಟಕ್ಕನೆ ಪ್ರಶ್ನೆ ಮಾಡಿದರು ಪರಶುರಾಮಪ್ಪ, ಜುಲ್‌ಫಿಕಾರ್ ಖಾನನ ಮುಖವನ್ನೇ ನೋಡುತ್ತಾ.

"ಜಾರ್ಜ ಡ್ಯುಪ್ರೋರೋ....ಜಾರ್ಜ ಡ್ಯುಪ್ರೋರೋ....ಹಾಗೆಂದರೆ ಯಾರು? ಈ ವಿಚಿತ್ರ ಹೆಸರಿನ ಮನುಷ್ಯನಿಗೂ ಮೆಹರ್‌ಬಾನುವಿಗೂ ಏನು ಸಂಬಂಧ?

—ಕ್ಷಣಕ್ಷಣಕ್ಕೂ ಬಿಗಿಯುತ್ತಿದ್ದ ಧ್ವನಿಯಲ್ಲಿ ಪ್ರಶ್ನೆ ಮಾಡಿದ ಜುಲ್‌ಫಿಕಾರ್ ಖಾನ್.

"ಯಾರೆಂದು ನಿಮಗೆ ತಿಳಿಯದೇ?"

"ಊಹುಂ. ಯಾರೆಂದು ನೀವೇ ಹೇಳಬೇಕು."

"ನಿಮಗೆ ತಿಳಿಯದಿದ್ದರೆ, ನಿಮ್ಮ ಈ ಪ್ರಶ್ನೆಗೆ ಮೆಹರ್‌ಬಾನುರವರೇ ಉತ್ತರ ಹೇಳಬೇಕು. ಅವರ ಆಪ್ತ ಮಿತ್ರರ ವಿಷಯದಲ್ಲಿ ಮಾತನಾಡಲು ನಮಗೆ ಅಧಿಕಾರವಿಲ್ಲ."

—ಎಂದರು ಪರಶುರಾಮಪ್ಪ ತಟಕ್ಕನೆ ಹುಷಾರಾಗಿ.

ಪರಶುರಾಮಪ್ಪನವರು ಹೇಳಿದುದನ್ನು ಕೇಳಿ, ಜುಲ್‌ಫಿಕಾರ್ ಖಾನನ ಹೃದಯದಲ್ಲಿ ಏನೋ ಬಿರುಗಾಳಿ ಬೀಸಲಾರಂಭಿಸಿತು. ಆ ಬಿರುಗಾಳಿಯ ಒತ್ತಡವನ್ನು ಭರಿಸಲಾಗದೆ —

"ಪ್ರಧಾನಿಜೀ ನನ್ನನ್ನು ಮಾಫ್ ಮಾಡಿ. ನಾನೀಗ ಮೆಹರ್‌ಬಾನು

ವನ್ನು ಕಾಣಲು ಹೋಗುತ್ತೇನೆ. ನನ್ನೊಂದಿಗೆ ಬಂದವನಿಗೆ, ಕೋಟೆಯ ಬಾಗಿಲ ಬಳಿ, ನನಗಾಗಿ ಕಾಯುವಂತೆ ಹೇಳಿ."

—ಎಂದು ಅಷ್ಟು ಹೇಳಿದವನೇ, ಪರಶುರಾಮಪ್ಪನವರ ಪ್ರತ್ಯುತ್ತರಕ್ಕೂ ಕಾಯದೆ, ಅದುವರೆಗೂ ನಿಧಾನವಾಗಿ ನಡೆಸುತ್ತಿದ್ದ ಕುದುರೆಯ ಪಕ್ಕೆಗಳನ್ನು ವೇಗವಾಗಿ ಹೋಗಲು ಸೂಚಕವಾಗಿ ಒತ್ತಿ, ಕೈಯಲ್ಲಿದ್ದ ಚಬಕಿನಿಂದ ಅದರ ಕತ್ತನ್ನು ಬಾರಿಸಿ, ಕಡಿವಾಣವನ್ನು ಸಡಿಲಬಿಟ್ಟು, ಮೆಹರ್‌ಬಾನುವಿನ ಮನೆಯತ್ತ ನಾಗಾಲೋಟದಲ್ಲಿ ದೌಡಾಯಿಸಿದ.

ಅವನ ವಿಚಿತ್ರ ವರ್ತನೆಯನ್ನು ಕಂಡು ಒಂದುಗಳಿಗೆ ದಂಗು ಬಡಿದಂತಿದ್ದ, ಪರಶುರಾಮಪ್ಪನವರೂ, ಏನೋ ಯೋಚಿಸಿ, ಮರುಗಳಿಗೆಯೇ ಜುಲ್‌ಫಿಕಾರ್‌ಖಾನನ ಕುದುರೆಯ ಹಿಂದೇ ತಮ್ಮ ಕುದುರೆಯನ್ನು ವೇಗವಾಗಿ ಓಡಿಸಿದರು.

೩

ಜಾರ್ಜ್ ಡ್ಯುವೋಲೋ ತನ್ನ ಪ್ರಣಯವನ್ನು ಸ್ವೀಕರಿಸಿದ ಗಳಿಗೆಯಿಂದ ಮೆಹರ್‌ಬಾನು ಉನ್ಮತ್ತ ಪ್ರಣಯಿನಿಯಾಗಿದ್ದಳು !

ಬಹುದಿನಗಳ, ಅತ್ಯುಗ್ರ, ಅಸಹಜ ನಿರೋಧದಿಂದ ವಿಮುಕ್ತವಾದ ಅವಳ ಸ್ತ್ರೀ ಸಹಜ ಭಾವನೆಗಳು, ರಾಗ-ಭಾವಗಳು, ಅವಳ ಕಿಂಕರತ್ವವನ್ನು ತ್ಯಜಿಸಿ, ಇಂದು ತಾವೇ ಅವಳ ಅಧಿಪತಿಗಳಾಗಿ, ಅವುಗಳ ಅನಿರ್ಬಂಧಿತ ಆಳ್ವಿಕೆಯಲ್ಲಿ, ಅವಳ ಅನುರಾಗ, ಅತಿರೇಕದ ಮಟ್ಟವನ್ನು ಮುಟ್ಟಿ, ತನ್ನ ಪ್ರಣಯದ ಆರಾಧ್ಯ ದೇವತೆಯಾದ ಜಾರ್ಜನ ಧ್ಯಾನವಲ್ಲದೆ, ಬೇರಾವ ಚಿಂತೆಯೂ ಅವಳ ಪಾಲಿಗೆ ಉಳಿದಿರಲಿಲ್ಲ.

ಆ ಉತ್ಕಟ ಪ್ರಣಯದೊಂದಿಗೆ, ಜಾರ್ಜ್ ಬಹುಬೇಗ ಯುದ್ಧಭೂಮಿಗೆ ತೆರಳಲಿದ್ದುದರಿಂದ, ಆ ಬರಲಿರುವ ಅನಿವಾರ್ಯ ವಿಯೋಗದ ಭಾವನೆ, ಸಾವು ಬದುಕಿನೊಂದಿಗೆ ಕ್ಷಣಕ್ಷಣಕ್ಕೂ ಸರಸವಾಡುವ ಸಮರಾಂಗಣದಲ್ಲಿ ತನ್ನ ಪ್ರಿಯತಮನಿಗೆ ಏನಾಗುವುದೋ, ಮತ್ತೆ ಆತ ತನ್ನನ್ನು ಸೇರಲು ಹಿಂದೆ ಬರುವನೋ

ಇಲ್ಲವೋ ಎಂಬ ಅನಿಶ್ಚಯತೆಯ ಕಾತುರ – ಇವೆಲ್ಲವೂ ಬೆರೆತು, ಅವನನ್ನು ಒಂದು ಗಳಿಗೆ ಬಿಟ್ಟಿರಬೇಕೆಂದರೂ ಮೆಹರ್‌ಬಾನು ಹುಚ್ಚಳಂತಾಗುತ್ತಿದ್ದಳು.

ಇದ್ದಷ್ಟು ಹೊತ್ತು ತಾನು ಅವನ ತೋಳತೆಕ್ಕೆಯಲ್ಲೇ ಇರಬೇಕು; ಅವನ ಧೃತ ಬಾಹುಗಳ ಬಿಗಿತಕ್ಕೆ ತನ್ನ ಮೈಯನ್ನೊಪ್ಪಿಸಿ, ತನ್ನ ದೇಹದ ನಿಕಟ ಸಾಮೀಪ್ಯದಿಂದ ಉದ್ರಿಕ್ತವಾದ ಅವನ ಕಾಮತಪ್ತ ತುಟಿಗಳ ಚುಂಬನವನ್ನಾಸ್ವಾದಿಸುತ್ತಾ ಇರಬೇಕೆಂಬ ಬಯಕೆ ಅವಳದು.

ಆ ಬಯಕೆಗೆ ಯಾರು ಇದಿರಾದರೂ ಮೆಹರ್‌ಬಾನು ಬಿರುಗಾಳಿಯಾಗುತ್ತಿದ್ದಳು.

ತನ್ನ ಬಾಳಿನಲ್ಲಿ ಆರಂಭವಾದ ಆ ಉಗ್ರ ಪ್ರಣಯತಾಂಡವದಲ್ಲಿ ಅವಳಿಗೆ ತನ್ನ ತಾಯಿಯ ಎಚ್ಚರಿಕೆಯ ಮಾತಿನ ಪರಿವೆಯಾಗಲಿ, ಲೋಕಾಪವಾದದ ಭೀತಿಯಾಗಲಿ, ಜಗತ್ತು ತನ್ನ ನಡತೆಗೆ ಏನು ಅರ್ಥ ಕಲ್ಪಿಸಬಹುದೆಂಬ ಚಿಂತೆಯಾಗಲಿ – ಯಾವುದೂ ಉಳಿದಿರಲಿಲ್ಲ.

ಅವಳಿಗೆ ತಿಳಿದಿದ್ದುದಷ್ಟೆ: ಜಾರ್ಜ್ ತನ್ನ ಜೊತೆಯಲ್ಲಿರಬೇಕು; ತಾನು ಅವನ ತೋಳತೆಕ್ಕೆಯಲ್ಲಿರಬೇಕು; ಅದರ ಇದಿರು ಉಳಿದಾವುದಕ್ಕೂ ಅರ್ಥವಿಲ್ಲ, ಬೆಲೆಯಿಲ್ಲ.

ಹೀಗೆ, ಮೆಹರ್‌ಬಾನುವಿನ ಬಾಳು ಯಾವ ರೀತಿಯಲ್ಲಿ ಪ್ರಣಯ ಜಂಝಾವಾತಕ್ಕೆ ಸಿಲುಕಿ ತರಗೆಲೆಯಂತೆ ಪರಿಭ್ರಮಣ ಮಾಡುತ್ತಿತ್ತೊ, ಜಾರ್ಜ್ ಡ್ಯುಪ್ರೋರೋನ ಬಾಳೂ ಅದೇ ಮಾರ್ಗಾನುಯಾಯಿಯಾಗಿತ್ತು.

ಜಗತ್ತಿನ ಉಳಿದೆಲ್ಲವನ್ನು ಮರೆತು, ಕೇವಲ ಪ್ರಣಯ ಚಿಂತನೆಯೊಂದನ್ನೇ ಮಾಡಬೇಕೆಂಬ ಬಯಕೆ, ಮೆಹರ್‌ಬಾನುವಿಗಿದ್ದಷ್ಟೇ ಜಾನನಿಗೂ ಇದ್ದು, ಜಗತ್ತಿನ ವಿಷಯ ತಮ್ಮೀರ್ವರ ಮಧ್ಯೆ ಅನಪೇಕ್ಷಿತ ಅಭ್ಯಾಗತನಂತೆ ಪ್ರವೇಶಿಸಿದಾಗ, ಅದರ ಬಗ್ಗೆ ಅವನಿಗೂ ಸಿಟ್ಟು ಬರುತ್ತಿತ್ತು. ಈ ಹುಚ್ಚಿನಲ್ಲಿ ಒಮ್ಮೊಮ್ಮೆ ಅವನಿಗೆ ತಮ್ಮೀರ್ವರ ವಿಯೋಗಕ್ಕೆ ಕಾರಣವಾದ ತನ್ನ ಪ್ರತಿಜ್ಞೆಯ ಬಗ್ಗೆಯೇ ಬೇಸರವಾದರೆ, ಮತ್ತೊಮ್ಮೆ ಇರುವ ಅಲ್ಪಕಾಲವನ್ನು ನಿರಾತಂಕವಾಗಿ ಮೆಹರಳೊಂದಿಗೆ ವಿಹರಿಸಲು ಅಡ್ಡಿ ಬರುತ್ತಿದ್ದ ನಕ್ಷೆಯನ್ನು ಬರೆದು ಮುಗಿಸಬೇಕಾದ ಕೆಲಸದ ಬಗ್ಗೆ ಸಿಟ್ಟು ಬರುತ್ತಿತ್ತು.

ಬರೀ ಸಿಟ್ಟು, ಬೇಸರವಷ್ಟೇ ಅಲ್ಲ —

ಒಮ್ಮೊಮ್ಮೆ ತನ್ನ ಬಾಳಿನ ಬಿರುಬೇಸಿಗೆಯ ತಂಬೆಲರಿನಂತೆ ಸುಳಿದು

ಬಂದು, ನಿರ್ಮಲ ಪ್ರಣಯದಿಂದ ತನ್ನ ಬಾಳನ್ನು ನಿತ್ಯವಸಂತೋತ್ಸವವನ್ನಾಗಿಸಿದ ಮೆಹರ್ ಬಾನುವಿನ ಬಗ್ಗೆ ಕೃತಜ್ಞತಾಭಾವಪೂರ್ಣ ಅಭಿಮಾನ ಮೂಡಿದರೆ, ಒಮ್ಮೊಮ್ಮೆ ಮೆಹರ್ ಬಾನುವಿನ ಪ್ರಣಯದ ಉನ್ಮತ್ತ ಉತ್ಕಟತೆಯನ್ನು ಕಂಡಾಗ, ಆರುವ ಮುನ್ನ ಬಹು ಉಜ್ವಲವಾಗಿ ಜ್ವಲಿಸುವ ಜ್ವಾಲೆಯ ನೆನಪಾಗಿ, ಅವನ ಹೃದಯದಲ್ಲಿ ಅಕಾರಣ ಭೀತಿ ಮೂಡಿ, ವಿಹ್ವಲವಾಗಿ, ಇರುವಷ್ಟು ಸಮಯವನ್ನಾದರೂ, ಒಂದು ಗಳಿಗೆಯೂ ಅವಳಿಂದ ದೂರವಾಗದೆ ಇರಬೇಕೆಂದು ನಿಶ್ಚಯಿಸುತ್ತಿದ್ದ.

ಆ ನಿಶ್ಚಯದಿಂದಾಗಿಯೇ ಜಾನ್ ಮೆಹರ್ ಬಾನುವಿನ ಮನೆಯಲ್ಲಿ ಬಂದಿರಲಾರಂಭಿಸಿದ್ದ.

ಎಂದಿನಂತೆಯೇ ಆ ದಿನವೂ —

ಹಗಲು ಎದ್ದು ಜಾರ್ಜ್, ಮೆಹರ್ ಬಾನುವಿನ ಕೋಣೆಯಲ್ಲೇ ಕುಳಿತು, ಮುಗಿಯಲು ಬಂದ ಕೆಲಸವನ್ನು ಮುಗಿಸುತ್ತಾ ಕುಳಿತಿದ್ದ. ಮೆಹರ್ ಬಾನುವೂ ಅವನಿಗೆ ಸಮೀಪದಲ್ಲಿಯೇ ಕುಳಿತು, ಅವನ ಕೆಲಸಕ್ಕೆ ತಾನು ಅಡ್ಡಿಯಾಗದಂತೆ ಕಸೂತಿ ಹಾಕುತ್ತಿದ್ದಳು.

ಅವರಿಬ್ಬರೂ ಹೀಗೆ ತಮ್ಮ ಕೆಲಸದಲ್ಲಿ ತನ್ಮಯರಾಗಿರುವಾಗಲೇ, ಇದ್ದಕ್ಕಿದ್ದ ಹಾಗೇ, ಅರೆಮುಚ್ಚಿದ ಬಾಗಿಲನ್ನು ಬಿರುಸಾಗಿ ತಳ್ಳಿಕೊಂಡು, ಒಳಗೆ ಬಂದ ದಾಸಿ —

"ಬಾನು ಸಾಹಿಬಾ....ಬಾನುಸಾಹಿಬಾ....ಸೀರ್ಯಧದ ಸರದಾರರು ಬಂದಿದ್ದಾರೆ...."

—ಎಂದು ಹೇಳಿದಳು.

ಆದರೆ ಅವಳ ಮಾತು ಮುಗಿಯಲೂ ಅವಕಾಶ ಕೊಡದೆ, ಜುಲ್ ಫಿಕಾರ್ ಖಾನ್ ಅವಳ ಬೆನ್ನ ಹಿಂದೆಯೇ ಕೋಣೆಯನ್ನು ಪ್ರವೇಶಿಸಿ —

"ನನ್ನಿಂದ ತಮ್ಮ ಏಕಾಂತಕ್ಕೆ ತೊಂದರೆ ಬಂದಿತೇನೋ"

—ಎಂದು ಹೇಳಿ, ತನ್ನ ಧ್ವನಿಯನ್ನು ಕೇಳಿ, ಎದ್ದು ತನ್ನತ್ತ ತಿರುಗಿ ನಿಂತ ಜಾರ್ಜ್ ಡ್ಯುವೋರೋನ ಮುಖವನ್ನು ಉರಿಗಣ್ಣುಗಳಿಂದ ನೋಡಿದ.

ಜುಲ್ ಫಿಕಾರ್ ಖಾನನ ಅನಿರೀಕ್ಷಿತ ಆಗಮನ, ಅವನ ಕ್ರೋಧ ವಿಕಾರವಾದ ಮುಖ, ಅವನು ಜಾರ್ಜ್ ಡ್ಯುವೋರೋನನ್ನು ನೋಡುತ್ತಿದ್ದ ಕ್ರೂರ ದೃಷ್ಟಿಯನ್ನು ಕಂಡು, ಮೆಹರ್ ಬಾನುವಿನ ಮೈಯಲ್ಲಿ ಇದ್ದಕ್ಕಿದ್ದ

ಹಾಗೇ ಬಿರುಗಾಳಿ ಬೀಸಿದಂತಾಗಿ, ಅವಳ ಮುಖ ವಿವರ್ಣವಾಗಿ —

"ನೀವು....ನೀವು....ಇಲ್ಲಿಗೆ ಯಾವಾಗ ಬಂದಿರಿ?"

—ಎಂದು ತೊದಲುತ್ತಾ ಕೇಳಿದಳು.

"ಇವನು ಯಾರು?"

—ಮೆಹರ್ ಬಾನುವಿನ ಮಾತೇ ಕಿವಿಗೆ ಬೀಳದವನಂತೆ, ಜುಲ್ಫಿಕಾರ್ ಖಾನ್, ತನ್ನನ್ನೇ ನೋಡುತ್ತಾ ನಿಂತ ಡ್ಯುವ್ರೋರೋನತ್ತ ಚೂರಿಯಂತೆ ಕೈ ಬೆರಳು ಚಾಚಿ ತೋರಿಸಿ ಕೇಳಿದ.

ಮೆಹರ್ ಬಾನು, ತನ್ನ ಅಪ್ರತಿಹತ ಅಧಿಕಾರಕೊಳ್ಳಪಟ್ಟ ಬಾಂದಿ ಯೆಂಬಂತೆ ತಾತ್ಸಾರಪೂರಿತ ರೀತಿಯಲ್ಲಿ ಜುಲ್ಫಿಕಾರ್ ಖಾ಼ ಕೇಳಿದ ಪ್ರಶ್ನೆಯನ್ನು ಕೇಳಿ, ಜಾ಼ಗೆ ಅವನ ಮೇಲೆ ಸಿಟ್ಟು ಬಂತು. ಆದರೆ ಜುಲ್ಫಿಕಾರ್ ಖಾ಼ ಯಾರೋ, ಅವನಿಗೂ ಮೆಹರ್ ಬಾನುವಿಗೂ ಇರುವ ಸಂಬಂಧವೇನಿದ್ದೋ ಎಂಬುದು ತಿಳಿಯದಿದ್ದುದರಿಂದ, ತನ್ನ ಸಿಟ್ಟನ್ನು ತಡೆ ಹಿಡಿದು, ಮೆಹರ್ ಬಾನುವಿನ ಪಕ್ಕದಲ್ಲಿ ನಿಂತು—

"ನಿನ್ನ ಮಿತ್ರರಿಗೆ ಕುಳಿತುಕೊಂಡು ಮಾತಾಡಲು ಹೇಳು ಮೆಹರ್. ಈ ರೀತಿ, ಏಕಾಏಕಿ ಒಳಗೆ ನುಗ್ಗಿ, ಹೀಗೆ ಮಾತನಾಡುವುದು ಸಭ್ಯತೆಯಲ್ಲ, ಇವರು ಯಾರು?........"

—ಎಂದು ಕೊಂಚ ಬಿರುಸಾದ ಧ್ವನಿಯಲ್ಲಿ ಕೇಳಿದ.

"ನಾನು ಯಾರೆಂದು ನೀವು ತಿಳಿಯಬೇಕಾದ ಅಗತ್ಯವೇನೂ ಇಲ್ಲ. ಇಲ್ಲಿಂದ ಹೊರಗೆ ಹೋಗಿ, ನಾನು ಬಾನುಸಾಹೇಬರೊಂದಿಗೆ ಆಡಬೇಕಾದ ಮಾತುಗಳಿವೆ."

— ಜಾನನನ್ನು ಅಪಮಾನಿಸುವ ಧ್ವನಿಯಲ್ಲಿ ಹೇಳಿದ ಜುಲ್ಫಿಕಾರ್ ಖಾನ್.

ಜುಲ್ಫಿಕಾರ್ ಖಾನನ ಆ ಅನಾಗರಿಕ ಉದ್ಧಟತನವನ್ನು ಕಂಡು, ಮೆಹರ್ ಬಾನುವನ್ನು ಕವಿದಿದ್ದ ಭೀತಿ ತೊಲಗಿ, ಆ ಸ್ಥಾನದಲ್ಲಿ ರೋಷವು ಆಕ್ರಮಿಸಿ—

"ಖಾನ್ ಸಾಹೇಬ್, ತಮ್ಮ ವರ್ತನೆ ಸಜ್ಜನಿಕೆಯ ಮೇರೆಯನ್ನು ಮೀರುತ್ತಿದೆ. ತಮ್ಮ ಮಾತು ನನ್ನನ್ನೇ ಅಲ್ಲ, ನನ್ನ ಭಾಗ್ಯದೇವತೆಯನ್ನೂ ಅಪಮಾನಗೊಳಿಸುತ್ತಿದೆ. ತಾವು ಇದೇ ರೀತಿಯಲ್ಲೇ ಮಾತನಾಡಬಯಸು

ವುದಾದರೆ, ನಾನು ತಮ್ಮೊಂದಿಗೆ ಆಡಬೇಕಾದ ಮಾತುಗಳೇನೂ ಇಲ್ಲ, ನೀವು ಬಂದ ದಾರಿಯನ್ನು ಹಿಡಿದು ಹೋಗಬಹುದು."

—ಎಂದಳು.

ಅವಳ ಮಾತನ್ನು ಕೇಳಿದ ಜುಲ್‌ಫಿಕಾರ್‌ಖಾನ್ ಹೆಡೆ ತುಳಿದ ಹಾವಾದ.

"ಇವನು ನಿನ್ನ ಭಾಗ್ಯದೇವತೆಯೇ?! ತಪ್ಪು ಮಾಡುತ್ತಿದ್ದೀಯ ಮೆಹರ್, ನಿನ್ನ ಜೀವನದ ಬಹು ಭಯಂಕರ ತಪ್ಪು ಮಾಡುತ್ತಿದೀಯ. ನನ್ನನು ನೀನರಿಯೆ—ತಾನು ಪ್ರೀತಿಸಿದ ಹೆಣ್ಣು ಪರರ ಪಾಲಾಗುವುದನ್ನು ಎಂದೂ ಸಹಿಸುನವನಲ್ಲ ಈ ಜುಲ್‌ಫಿಕಾರ್‌ಖಾನ್. ಈಗಲೂ ಹೇಳುತ್ತೇನೆ– ಅವನನ್ನಾಚೆಗೆ ಅಟ್ಟಿ, ನನ್ನೊಂದಿಗೆ ಹೊರಟು ಬಾ, ನನ್ನ ಹೃದಯದ ಪ್ರೇಮ ದ್ವೇಷವಾಗುವ ಮುನ್ನ ಈ ತಪ್ಪು ತಿದ್ದಿಕೋ"

—ಸಿಟ್ಟಿನಲ್ಲಿ ಬುಸುಗುಟ್ಟುತ್ತಾ, ಮೆಹರ್‌ಬಾನುವಿಗೆ ಅಪ್ಪಣೆ ಮಾಡುವವನಂತೆ ಹೇಳಿ, ಮೆಹರ್‌ಬಾನುವನ್ನು ತನ್ನತ್ತ ಎಳೆದುಕೊಳ್ಳಲು ಅವಳ ಕಡೆಗೆ ತೋಳು ಚಾಚಿದ.

ಅವನ ತೋಳು ತನ್ನ ಸನಿಹಕ್ಕೆ ಸುಳಿಯುತ್ತಿದ್ದ ಹಾಗೇ, ಮೆಹರ್‌ಬಾನು ಹುಲಿಯನ್ನು ಕಂಡು ಅಂಜಿದ ಹುಲ್ಲೆಯಂತೆ ಹಿಮ್ಮೆಟ್ಟಿದಳು.

ಜುಲ್‌ಫಿಕಾರ್‌ಖಾನನಾಡಿದ ಉದ್ಧಟ ಮಾತು, ತನ್ನ ಬಗ್ಗೆ ಅವನು ವ್ಯಕ್ತಪಡಿಸಿದ ಭಾವನೆಗಳಿಂದ ಅವಳ ಮುಖ ತಪ್ತವಾಗಿ, ಅವಳ ಕಣ್ಣಲ್ಲಿ ಅಪಮಾನದ ಕಂಬನಿ ತುಂಬಿತು.

ಅದುವರೆಗೂ, ತನ್ನ ಸಹನೆಯನ್ನು ಅತ್ಯಂತ ಪ್ರಯತ್ನದಿಂದ ಕಾಯ್ದುಕೊಂಡ ಜರ್ಖಾನಗೆ, ಮೆಹರ್‌ಬಾನುವಿನ ಕಣ್ಣಲ್ಲಿ ಕಂಬನಿಯನ್ನು ಕಂಡು ಬಳಿಕ, ಅದನ್ನುಳಿಸಿಕೊಳ್ಳುವುದು ಅಸಾಧ್ಯವಾಗಿ, ಸರ್ರನೆ ಮುಂದೆ ನುಗ್ಗಿ, ಎಡಗೈಯಲ್ಲಿ ಜುಲ್‌ಫಿಕಾರ್‌ಖಾನನ ಕವಚದ ವಕ್ಷಭಾಗವನ್ನು ಬಿಗಿಯಾಗಿ ಹಿಡಿದು, ಮತ್ತೊಂದು ಮುಷ್ಟಿಯನ್ನೆತ್ತಿ, ಜುಲ್‌ಫಿಕಾರ್‌ಖಾನನ ಮುಖದ ಮೇಲೆ ಅಪ್ಪಳಿಸಿ—

"ಇಲ್ಲಿಂದ ತೊಲಗಾಚೆ. ನಾಚಿಕೆಗೆಟ್ಟ ನಾಯಿ! ನಿನ್ನಂಥಹ ನೀಚನ ಸ್ಪರ್ಶದಿಂದ ನನ್ನ ಕೈಯನ್ನು ಕಳಂಕಿತಗೊಳಿಸಿಕೊಳ್ಳಲು ನನಗೆ ಆಸೆಯಿಲ್ಲ.

ಆದರೂ ಇನ್ನೊಂದು ಗಳಿಗೆ ನೀನಿಲ್ಲಿ ನಿಂತರೆ, ಜೀವಸಹಿತ ಹಿಂದಿರುಗಲಾರೆ—"

—ಎಂದು ಅಬ್ಬರಿಸಿ, ಅವನನ್ನು ಆಚೆಗೆ ತಳ್ಳಿದ.

ಜಾನ್ ತನ್ನನ್ನು ತಳ್ಳಿದ ವೇಗಕ್ಕೆ ಅಷ್ಟುದೂರ ಹಾರಿದ ಜುಲ್ಫಿಕಾರ್ ಖಾನ್, ನೆಲಕ್ಕೆ ಬೀಳದಂತೆ ತನ್ನ ದೇಹದ ಸಮತೋಲನವನ್ನು ರಕ್ಷಿಸಿಕೊಂಡು, ಮಿಂಚಿನ ವೇಗದಲ್ಲಿ ತನ್ನ ಕಟಿಯಲ್ಲಿದ್ದ ಕತ್ತಿಯನ್ನು ಹಿರಿದು—

"ಸೈತಾನ್, ಇದು ನಿನ್ನ ಕೊನೆಯ ದಿನ."

—ಎಂದು ಹಲ್ಲು ಕಡಿಯುತ್ತಾ ಜಾನನತ್ತ ನುಗ್ಗಿದ.

ನಿಶ್ಶಸ್ತ್ರನಾದ ಜಾನನ ಮೇಲೆ, ಶಸ್ತ್ರಪಾಣಿಯಾದ ಜುಲ್ಫಿಕಾರ್ ಖಾನ್ ಹರಿಹಾಯುತ್ತಿದ್ದುದನ್ನು ಕಂಡು ಹೆದರಿದ ಮೆಹರುಬಾನು ಚಿಟ್ಟನೆ ಚೀರಿದಳು.

ಒಮ್ಮೆ ಜುಲ್ಫಿಕಾರ್ ಖಾನ್ ಬೀಸಿದ ಖಡ್ಗದ ಆಘಾತವನ್ನು ಜಾನ್ ಚತುರತೆಯಿಂದ ತಪ್ಪಿಸಿಕೊಂಡ. ಆದರೆ ಜುಲ್ಫಿಕಾರ್ ಖಾನ್ ಮತ್ತೊಮ್ಮೆ ತನ್ನ ಕತ್ತಿಯನ್ನು ಬೀಸುವುದರೊಳಗಾಗಿ, ಇವರ ನಡುವೆ ನಡೆಯುತ್ತಿದ್ದ ಮಾತುಕಥೆಗಳನ್ನು ಕೇಳುತ್ತಿದ್ದ ಪರಶುರಾಮಪ್ಪನವರು, ಕಾವಲ ಭಟರೊಂದಿಗೆ ಒಳಗೆ ನುಗ್ಗಿ—

"ಖಾನ್ ಸಾಹೇಬ್, ಕತ್ತಿಯನ್ನು ಬಿಸುಡಿ. ಪರಸ್ತ್ರೀಯನ್ನು ಛಲಸುವ ಈ ವರ್ತನೆ ನಿಮ್ಮಂಥವರಿಗೆ ಶೋಭಿಸುವುದಿಲ್ಲ."

—ಎಂದು ಹೇಳಿ, ಜುಲ್ಫಿಕಾರ್ ಖಾನನ ಕೈ ತಡೆದರು.

"ನನ್ನ ಕೈ ಬಿಡಿ, ಪ್ರಧಾನೀಜೀ! ಇದು ನನ್ನ ವೈಯಕ್ತಿಕ ವಿಷಯ. ಇದರ ಮಧ್ಯೆ ನೀವು ಪ್ರವೇಶಿಸಬಾರದು."

—ಎಂದ ಜುಲ್ಫಿಕಾರ್ ಖಾನ್, ಪರಶುರಾಮಪ್ಪನವರಿಗೂ ಸಗ್ಗದೆ.

"ಇದು ನಿಮ್ಮ ವೈಯಕ್ತಿಕ ವಿಷಯವಾದರೂ ಪ್ರಭುಗಳ ಆಶ್ರಿತರ ಪ್ರಾಣಾಪಹರಣ ಪ್ರಯತ್ನ. ಆದರೂ ನೀವು ಸೀರ್ಯದವರ ರಾಯಭಾರಿಗಳಾದುದರಿಂದ ನಿಮಗೆ ನಮ್ಮ ರಕ್ಷಣೆ ಇದೆ; ಅಷ್ಟೆ. ಆ ವಿಷಯವನ್ನು ಹೆಚ್ಚು-ಕೆದಕಬೇಡಿ. ಅದರಿಂದ ಒಳಿತಾಗದು."

—ಅತ್ಯಂತ ನಿಷ್ಠುರವಾಗಿ ಹೇಳಿದರು ಪರಶುರಾಮಪ್ಪನವರು.

ಅವರ ಮಾತಿನ ಅರ್ಥವನ್ನು ಗ್ರಹಿಸಿದ ಜುಲ್ಫಿಕಾರ್ ಖಾನನ ಮುಖ, ಕ್ರೋಧದಿಂದ ವಿವರ್ಣವಾಗಿ—

"ಈ ವಿಷಯದಲ್ಲಿ, ನೀವೂ ನಿಮ್ಮ ಪ್ರಭುಗಳೂ ಇವನಿಗೆ 'ಪಂಗಾ' ಗಿದ್ದೀರೆಂದು ನನಗೆ ತಿಳಿದಿರಲಿಲ್ಲ, ಕ್ಷಮಿಸಿ."

—ಎಂದು ಕಟುವ್ಯಂಗ್ಯದ ಧ್ವನಿಯಲ್ಲಿ ಹೇಳಿ, ಜಾನ್, ಮೆಹರ್ ಬಾನು ಗಳತ್ತ ತಿರುಗಿ—

"ಇಂದಿಗೆ ಇದು ಕೊನೆಯಾಗಲಿಲ್ಲ ಮೆಹರ್, ಇಂದಿನಿಂದ ಇದು ಆರಂಭ. ಇಬ್ಬರಲ್ಲೊಬ್ಬರು ಸಾಯದೆ ಇದು ಮುಗಿಯುವುದಿಲ್ಲ, ಬರುತ್ತೇನೆ."

—ಎಂದು ಹೇಳಿ ಬೇರಾವ ಮಾತಿಗೂ ಕಾಯದೆ, ಪೆಟ್ಟು ತಿಂದ ಸರ್ಪದಂತೆ ಬುಸುಗುಟ್ಟುತ್ತಾ ಅಲ್ಲಿಂದ ಹೊರಟು ಹೋದ.

ಜುಲ್ಫಿಕಾರ್ ಖಾನ್ ಅಲ್ಲಿಂದ ಹೊರಟು ಹೋದ ಕ್ಷಣಕಾಲದ ಬಳಿಕ, ಮೆಹರ್ ಬಾನು ಕೃತಜ್ಞತೆಯ ಅಶ್ರುಗಳನ್ನು ಕರೆಯುತ್ತಾ—

"ಪ್ರಧಾನಿಗಳೇ, ಈ ದಿನ ನಿಮ್ಮಿಂದ ನನ್ನ ಪ್ರಾಣ, ನನ್ನ ಪ್ರಾಣಕ್ಕೂ ಮಿಗಿಲಾದ ಪ್ರಾಣ ಉಳಿಯಿತು. ನಿಮ್ಮ ಇಂದಿನ ಉಪಕಾರವನ್ನು ನಾನೆಂದೆಂದೂ ತೀರಿಸಲಾರೆ."

—ಎಂದಳು.

"ತಂಗೀ, ನಿನ್ನ ಕೃತಜ್ಞತೆಯ ಮಾತುಗಳಿಗೆ ನಾನು ಅರ್ಹನಲ್ಲ. ನನ್ನ ಸಂಶಯದ ಬುದ್ಧಿ ನಿನ್ನ ಬಾಳಿನಲ್ಲಿ ಬಿತ್ತಿದ ವಿಷಬೀಜವನ್ನು ನೀನರಿಯೆ...."

—ಎಂದರು ಪರಶುರಾಮಪ್ಪ ಪಶ್ಚಾತ್ತಾಪದಿಂದ ದಗ್ಧವಾಗುತ್ತಿದ್ದ ಧ್ವನಿಯಲ್ಲಿ.

"ಇದೇನು – ನನ್ನ ಬಾಳಿನಲ್ಲಿ ನೀವೇನು ವಿಷಬೀಜ ಬಿತ್ತಿದಿರಿ....ನಿಮ್ಮ ಮಾತೇ ನನಗರ್ಥವಾಗುತ್ತಿಲ್ಲ."

—ದಿಗ್ಭ್ರಾಂತಳಾಗಿ ಮೆಹರ್ ಬಾನು.

"ಇರುವ ಮಾತನ್ನು ಹೇಳದಿದ್ದರೆ ಸತ್ಯಕ್ಕೆ ಅಪಚಾರವಾಗುತ್ತದೆ. ನೀವೀರ್ವರೂ ಪ್ರಣಯಿಗಳೆಂದು ತಿಳಿಯದೆ, ಪರಸ್ಪರ ಸಮಾಲೋಚನೆಗೆ ಸೇರಿದ ಗೂಢಚಾರರೆಂದು ಭಾವಿಸಿ, ನಿಮ್ಮ ಬಗ್ಗೆ ಸತ್ಯವನ್ನರಿಯಲು, ನಾನೇ ಜುಲ್ಫಿಕಾರ್ ಖಾನ್ ಇಲ್ಲಿಗೆ ಬರಲು ಕಾರಣವಾದೆ. ನನ್ನ ಈ ತಪ್ಪಿತದಿಂದ ಜಾನ್ ಸಾಹೇಬರ ಜೀವನದ ಮೇಲೆ, ಜುಲ್ಫಿಕಾರ್ ಖಾನನ ಪ್ರತೀಕಾರ ತೃಷಾಸರ್ಪದ ಘಣೆಯಾಡಲು ಕಾರಣವಾಯಿತು. ಅದಿಲ್ಲವಾದಲ್ಲಿ ಜುಲ್

ಫಿಕಾರ್ ಖಾನ್ ಈ ದಿನ ಇಲ್ಲಿಗೆ ಬರುತ್ತಿಲ್ಲ."

"ಅಂದರೆ....ಅಂದರೆ....ನಿಮಗಿನ್ನೂ ನನ್ನ ಬಗ್ಗೆ ಸಂಶಯವೇ?"

—ವ್ಯಥಿತಾಂತಃಕರಣಳಾಗಿ ಕೇಳಿದಳು ಮೆಹರ್ ಬಾನು.

"ದುರ್ಗದ ರಾಜಕಾರಣದಲ್ಲಿ ಹೊಸ ಗಾಳಿ ಬೀಸುತ್ತಿರುವ ಈ ಹೊತ್ತಿನಲ್ಲಿ, ನನ್ನವೇ ನನಗೆ ನಂಬಿಕೆಯಿಲ್ಲ ಸೋದರಿ. ಆದರೂ, ಈ ದಿನ ನನ್ನಿಂದಾದ ಅಪಚಾರಕ್ಕೆ ನೀವು ಕೇಳಿದ ದಂಡ ಕೊಡಲು ನಾನು ಸಿದ್ಧನಾಗಿದ್ದೇನೆ."

"ಇನ್ನೇಕೆ ದಂಡ, ದೋಷದ ಮಾತು, ಹೇಗಾದರೂ ನಿಮಗೆ ನಮ್ಮ ಬಗ್ಗೆ ಇದ್ದ ಅನುಮಾನ ತೀರಿತಲ್ಲ..."

—ಬಹು ಶುಷ್ಕವಾದ ಧ್ವನಿಯಲ್ಲಿ ಹೇಳಿದಳು ಮೆಹರ್ ಬಾನು.

"ಮೆಹರ್, ವಜೀರ್ ಸಾಹೇಬರ ಮಾತನ್ನು ತಪ್ಪು ತಿಳಿಯಬೇಡ. ನಾನಿಲ್ಲಿಗೆ ಬಂದು ಇರುವುದಕ್ಕೆ, ಆರಂಭಿಸುವ ಮೊದಲೇ ಇದ್ದ ವಿಷಯವನ್ನು ನಿಮಗೆ ತಿಳಿಸಿದ್ದರೆ, ಇದಾವುದೂ ಆಗುತ್ತಿರಲಿಲ್ಲ. ಇಂದಿನ ಪರಿಸ್ಥಿತಿಯಲ್ಲೂ ನೀವು ನನ್ನಲ್ಲಿ ಸಂದೇಹಿಸಿದುದು ಸರಿ. ಕೋಟಿ ಜನರ ರಕ್ಷಣೆಯ ಹೊಣೆ ಹೊತ್ತ ರಾಜಕಾರಣಕ್ಕೆ, ಕೇವಲ ಇಬ್ಬರ ಪ್ರಣಯ ವಿಷಯ ಸಾಮಾನ್ಯ ವಸ್ತುವೆಂಬುದು ತಿಳಿದಿದ್ದೂ, ಒಲುಮೆಗುರುಡನಾದ ನನಗೆ ಮರೆತು ಹೋಯಿತು........ಈಗಾದುದಕ್ಕೆ ತಾವು ಚಿಂತಿಸಬಾರದು. ಒಬ್ಬ ಜುಲ್ ಫಿಕಾರ್ ಖಾನ್ ಅಲ್ಲ, ಅಂಥವರು ಹತ್ತು ಜನ ಬಂದರೂ ರಕ್ಷಿಸಕೊಳ್ಳಬಲ್ಲ ಬಲ ತನ್ನಲ್ಲಿದೆ. ತಾವು ಆ ಯೋಚನೆಯನ್ನು ಬಿಡಿ........ಮರೆತು ಬಿಟ್ಟಿ. ನನ್ನ ಭಾಷೆ ಪ್ರಧಾನಿಗಳಿಗೆ ಅರ್ಥವಾಗುವುದಿಲ್ಲ. ಮೆಹರ್, ನೀನೇ ಅದನ್ನು ಅವರಿಗೆ ತಿಳಿಸಿ ಹೇಳು."

—ಎಂದ ಜ್ಯಾ ಡ್ಯುವ್ರೋರೋ.

ಆತನ ಮಾತಿನಂತೆ, ಮೆಹರ್ ಬಾನು ನಾಚುತ್ತಾ, ಅಳುಕುತ್ತಾ, ಜಾರ್ಜ್ ಹೇಳಿದುದನ್ನು ಪರಶುರಾಮಪ್ಪನವರಿಗೆ ವಿವರಿಸಿ—

"ಪ್ರಧಾನಿಗಳು ನಮ್ಮಿರ್ವರನ್ನೂ ಮನ್ನಿಸಿ ಹರಸಬೇಕು."

—ಎಂದು ಬೇಡಿದಳು.

"ಅನಂತ ಕಾಲ ಸುಖಿಗಳಾಗಿ ಬಾಳಿ. ನಿಮ್ಮಿರ್ವರ ಸುಖಕ್ಕಾಗಿ ನನ್ನಿಂದ ಆದುದನ್ನೆಲ್ಲಾ ಮಾಡಲು ಸಿದ್ಧನಾಗಿದ್ದೇನೆ. ಏನು ಬೇಕಾದರೂ

ಕೇಳಿ. ನಾನಿನ್ನು ಬರುತ್ತೇನೆ........"

—ಎಂದು ಹೇಳಿದರು, ಅಲ್ಲಿಂದ ಹೊರಡಲು ಸಿದ್ಧರಾಗಿ.

"ಅಂದ ಹಾಗೆ........ಒಂದು ಮಾತು ವಜೀರ್‌ಸಾಹೇಬ್."

—ಜಾರ್ಜ್ ಡ್ಯುಪ್ರೋರೋ ಹೋಗಲಿದ್ದ ಪರಶುರಾಮಪ್ಪನವರನ್ನು ತಡೆದು ಕೇಳಿದ.

"ಏನು ?"

"ಈ ದಿನ, ಇದ್ದಕ್ಕಿದ್ದ ಹಾಗೇ ಸೀರ್ಯದ ವಕೀಲರೇಕೆ ಇಲ್ಲಿಗೆ ಬಂದಿದ್ದರು ! ಯುದ್ಧದ ವಾರ್ತೆಯನ್ನೇನಾದರೂ ತಂದಿದ್ದರೆ ?"

—ಉತ್ಸುಕತೆಯಿಂದ ಕೇಳಿದ ಜಾನ್.

"ನಿನ್ನೆಯ ರಾತ್ರಿ ಮರಾಟರು ಸೀರ್ಯದವರ ಮೇಲೆ ದಾಳಿ ಆರಂಭಿಸಿದರಂತೆ. ಅದನ್ನು ತಿಳಿಸಿ, ನಮ್ಮನ್ನು ತುರುತಾಗಿ ಸೇನೆಯನ್ನು ಕಳಿಸುವಂತೆ ಕೇಳಲು ಬಂದಿದ್ದರು ಜುಲ್‌ಫಿಕಾರ್ ಖಾನ್."

"ಹಾಗೇ – ಹಾಗಾದರೆ ನಿಮ್ಮ ಸೇನೆ ಯಾವಾಗ ಹೊರಡುತ್ತದೆ ?"

"ಈಗಾಗಲೇ ಹೊರಡಲು ಜಮಾವಣೆಯಾಗುತ್ತಿರಬೇಕು. ಇಳಿ ಮಧ್ಯಾಹ್ನದ ವೇಳೆಗೆ ಹೊರಡುವುದಂತೂ ಖಂಡಿತ."

"ಹಾಗೇ – ಈ ನಕ್ಷೆಯ ಕೆಲಸ ಇನ್ನೂ ಸ್ವಲ್ಪ ಉಳಿದಿತ್ತು........ ಆಯಿತು, ಈಗ ಮಾಡಿರುವಷ್ಟನ್ನು ನಿಮಗೆ ಕೊಡುತ್ತೇನೆ. ನನ್ನ ಪರವಾಗಿ ಪ್ರಭುಗಳಿಗೆ ಒಪ್ಪಿಸಿ. 'ಯುದ್ಧದಿಂದ ಹಿಂದಿರುಗಿದ ಬಳಿಕ ಉಳಿದುದನ್ನು ಮುಗಿಸಿಕೊಡುತ್ತೇನೆ' ಎಂದು ತಿಳಿಸಿ...."

"ಅದಾಗುತ್ತದೆ – ಆದರೆ, ಸದ್ಯಕ್ಕೆ ನೀವು ಪ್ರತಿಜ್ಞೆಯ ವಿಚಾರ ಮರೆತುಬಿಡುವುದೇ ಒಳಿತು."

"ಏಕೆ ?"

"ಜುಲ್‌ಫಿಕಾರ್ ಖಾನ್ ನಿಮ್ಮ ವೈರಿಯಾದ ಈ ಹೊತ್ತಿನಲ್ಲಿ, ನಿಮ್ಮನ್ನು ಯುದ್ಧರಂಗಕ್ಕೆ ಕಳಿಸಲು ನನ್ನ ಮನಸ್ಸು ಒಪ್ಪುವುದಿಲ್ಲ...."

"ಛೀ, ಆ ಹುಳಕ್ಕೆ ಹೆದರಿ ನಾನು ಹೇಡಿಯಾಗಲೇ? ಆದಾಗದ ಮಾತು."

—ದೃಢ ನಿರ್ಧಾರದ ಧ್ವನಿಯಲ್ಲಿ ಹೇಳಿದ ಜಾರ್ಜ್.

—ಜಾರ್ಜನ ಆ ನಿರ್ಧಾರವನ್ನು ಅವನಿಗಾಗಿ ಅನುವಾದಿಸುತ್ತಿದ್ದ ಮೆಹರ್ ಬಾನು, ಅವನ ಕೊನೆಯ ಮಾತನ್ನು ಹೇಳಲಾಗದೆ ಬಿಕ್ಕಿಬಿಕ್ಕಿ ಅಳುತ್ತಾ —

"ಪ್ರಧಾನಿಗಳೇ ನೀವಾದರೂ ಅವರನ್ನು ತಡೆಯಿರಿ"

—ಎಂದು ಬೇಡಿದಳು.

"ಆತನನ್ನು ನಿನ್ನ ಪ್ರೇಮ ತಡೆಯಬೇಕಲ್ಲದೆ, ನಾನು ತಡೆಯಬಲ್ಲೆನೇ ತಾಯಿ, ನೀನೇ ಆ ಪ್ರಯತ್ನವನ್ನು ಮಾಡಬೇಕು."

ಅವರಿಬ್ಬರ ಮಾತು ಕಥೆಗಳ ರೀತಿ, ಮೆಹರ್‌ಬಾನುವಿನ ಕಣ್ಣೀರಿನಿಂದ ಅವರಿಬ್ಬರ ನಡುವಿನ ಮಾತುಗಳ ಅರ್ಥವನ್ನು ಗ್ರಹಿಸಿದ; ಜಾರ್ಜ ಡ್ಯುವ್ರೋರೋ ಮಮತೆಯಿಂದ, ಮೆಹರಳ ನೆತ್ತಿಯನ್ನು ನೇವರಿಸುತ್ತಾ —

"ಅಂಜಬೇಡ – ಕಂಬನಿಗರೆಯ ಬೇಡ ಮೆಹರ್. ನಿನ್ನ ಪ್ರಣಯದ ಅಭೇದ್ಯ ಕೋಟೆ ನನ್ನ ಜೀವದ ರಕ್ಷಣೆಯ ಹೊಣೆ ಹೊತ್ತಿರುವಾಗ, ಸಾವಿಗೂ ನನ್ನ ಬಳಿ ಸುಳಿಯುವ ಧೈರ್ಯವಾಗದು. ಧೈರ್ಯವಾಗಿ ನಗುನಗುತ್ತಾ, ನಾನು ಗೆದ್ದು ಬರುವುದನ್ನು ನಿರೀಕ್ಷಿಸುತ್ತಿರು...."

—ಎಂದು ಹೇಳಿ ಪರಶುರಾಮಪ್ಪನವರತ್ತ ತಿರುಗಿ —

"ನೀವೀಗ ಇಲ್ಲಿಗೆ ಬಂದುದು ಒಳ್ಳೆದಾಯಿತು. ಮೆಹರ್ ನಿಮಗೆ ನಕ್ಷೆಗಳನ್ನು ಕೊಡುತ್ತಾಳೆ. ನಾನು ಹಿಂದಿರುಗಿ ಬರುವವರೆಗೂ ಮೆಹರ್ ನನ್ನವಳಲ್ಲ, ನಿಮ್ಮ ಮಗಳು."

—ಎಂದು ಹೇಳಿ, ಮೆಹರಳನ್ನು ತಟಕ್ಕನೆ ಬಿಗಿದಪ್ಪಿ ಚುಂಬಿಸಿ, ಅವಳ ಕೈಯನ್ನು ಪರಶುರಾಮಪ್ಪನವರ ಕೈಯಲ್ಲಿಟ್ಟು —

"ನಾನಿನ್ನು ಬರುತ್ತೇನೆ ನಲ್ಲೆ"

—ಎಂದು ಹೇಳಿ, ಬಿರುಗಾಳಿಯ ವೇಗದಿಂದ ಅಲ್ಲಿಂದ ಹೊರಟು ಹೋದ.

ಜಾರ್ಜ ತನ್ನನ್ನು ಬಿಟ್ಟು ಹೋದುದನ್ನು ಕಂಡು ಮೆಹರ್‌ಬಾನು ನೆಲದ ಮೇಲೆ ಕುಸಿದು ಬಿಕ್ಕಿ ಅಳಲಾರಂಭಿಸಿದಳು.

ಆಕೆಯ ದುಃಖವನ್ನು ಕಂಡು ಪರಶುರಾಮಪ್ಪನವರ ಕರುಳೂ ಮಮ್ಮಲ ಮರುಗಿತು.

ತಾವು ಆಕೆಯ ಬಳಿಯಲ್ಲೇ ನೆಲದ ಮೇಲೆ ಕುಳಿತು, ವಾತ್ಸಲ್ಯದಿಂದ ಆಕೆಯ ಬೆನ್ನನ್ನು ನೇವರಿಸಿ ಹೇಳಿದರು—

"ಹೆದರಬೇಡ ಮಗಳೇ, ಆತನ ಜೀವಕ್ಕೇನೂ ಧಕ್ಕೆಯಾಗದ ವ್ಯವಸ್ಥೆಯನ್ನು ನಾನು ಮಾಡುತ್ತೇನೆ."

ಪರಶುರಾಮಪ್ಪನವರ ಮಾತಿನಂತೆ ಆ ದಿನ ಹಗಲು ಊಟ ಮುಗಿಸಿಕೊಂಡು ಸೀಯರ್ಸದವರ ಸಹಾಯಕ್ಕಾಗಿ ದುರ್ಗದಿಂದ ಸೇನೆ ಹೊರಟಿತು.

ಸೇನೆ ಹೊರಡುವ ಮೊದಲು, ಪರಶುರಾಮಪ್ಪನವರಿಂದ ಜಾರ್ಜ್-ಮೆಹರ್ ಬಾನುವಿನ ಪ್ರಣಯದ ವಿಷಯವನ್ನು ಅರಿತ ನಾಯಕರು, ಗುಟ್ಟಾಗಿ ಹೊಳಲಕೆರೆಯ ಬೊಮ್ಮಣ್ಣ, ಕುಡುತನಿಯ ವೆಂಕಣ್ಣ ಅವರುಗಳನ್ನು ತಮ್ಮಲ್ಲಿಗೆ ಕರೆಸಿಕೊಂಡು—

" ಈಗ ನಿಮ್ಮ ಮೇಲೆ ಯುದ್ಧದಲ್ಲಿ ಗೆಲವು ಸಾಧಿಸುವುದಕ್ಕಿಂತಲೂ ಹಿರಿದಾದ ಹೊಣೆಯನ್ನು ಹೊರಿಸುತ್ತಿದ್ದೇನೆ—ಅದು ಜಾರ್ಜ್ ಸಾಹೇಬರ ಜೀವವನ್ನು ರಕ್ಷಿಸುವ ವಿಷಯ. ಶತ್ರುಗಳಿಂದಲೇ ಅಲ್ಲದೆ, ನಮ್ಮವರೇ ಆದ ಸೀಯರ್ಸದವರಿಂದಲೂ ಅವರ ಪ್ರಾಣಾಪಹರಣ ಪ್ರಯತ್ನ ನಡೆಯಬಹುದು. ಆದ್ದರಿಂದ ನೀವೆಲ್ಲಾ ಕಣ್ಣಾಗಿ ಅವರನ್ನು ಕಾಪಾಡಿಕೊಂಡು ಬರಬೇಕು. ಯುದ್ಧಭೂಮಿಯಲ್ಲಿ ಅವರ ದೇಹಾಂತವಾದರೆ ಅದಕ್ಕೆ ನಿಮ್ಮ ಹೊಣೆಯಿಲ್ಲ. ಆದರೆ ವಿಶ್ವಾಸ ದ್ರೋಹದಿಂದ ಅವರ ಕೊಲೆಯಾದರೆ ಅದರ ಸಂಪೂರ್ಣ ಜವಾಬ್ದಾರಿ ನಿಮ್ಮದು."

—ಎಂದು ಎಚ್ಚರಿಕೆ ಹೇಳಿ ಕಳಿಸಿದರು.

ಯುದ್ಧದಂಥ ಗೊಂದಲದ ಪರಿಸ್ಥಿತಿಯಲ್ಲಿ ಯಾವೊಬ್ಬ ವ್ಯಕ್ತಿಯನ್ನು ಕಾಪಾಡುವುದು, ಯಾರೂ ಹೊರಲಾಗದ ಹೊಣೆ " ಎಂದು ಅವರು ಮೊದ ಮೊದಲು ಹಿಂಜರಿದರೂ ಜಾನನ ರಕ್ಷಣೆಯ ಬಗೆ ನಾಯಕರಿಗಿದ್ದ ಕಾತರತೆಯ ಕಾರಣವನ್ನು ಅರಿತ ಬಳಿಕ, ಅವರಿಬ್ಬರೂ ' ನಾವು ಬೆಂಗಾವಲಾಗಿದ್ದು ಆತನನ್ನು ಕಾಯ್ದು ತರುತ್ತೇವೆ' ಎಂದು ವಚನ ಕೊಟ್ಟರು.

ಅವರು ಆ ಭರವಸೆಯನ್ನು ನೀಡಿದ ಬಳಿಕ ನಾಯಕರ ಮನಸ್ಸಿಗೂ ಕೊಂಚ ನೆಮ್ಮದಿಯಾಯಿತು.

ನಾಯಕರಿಂದ ಆ ಮಾತನ್ನು ಕೇಳಿದ ಬಳಿಕ, ನಾಯಕರ ಅಂತಃಪುರದಲ್ಲಿ

ಕಣ್ಣೀರು ಕರೆಯುತ್ತಾ ಕುಳಿತಿದ್ದ ಮೆಹರ್‌ಬಾನುವಿನ ಜೀವಕ್ಕೂ ಸ್ವಲ್ಪ ಸಮಾಧಾನವಾಯಿತು.

ಆದರೆ ಇದಾವುದನ್ನೂ ಅರಿಯದ ಜಾರ್ಜ್, ತನ್ನ ಪ್ರತಿಜ್ಞೆ ಪೂರ್ಣವಾಗುವ ಸಮಯವನ್ನು ನಿರೀಕ್ಷಿಸುತ್ತಾ ಉತ್ಸಾಹದಿಂದ ದುರ್ಗದ ಸೇನೆಯನ್ನು ಗೆಲುವಿಗೆ ನಡೆಸುವ ಭರವಸೆಯಿಂದ, ಸೇನೆಯೊಂದಿಗೆ ಹೊರಟ.

* * * *

ದುರ್ಗದವರ ಸೇನೆ ಹೊರಡುವುದಕ್ಕೆ ಬಹು ಮುಂಚಿತವಾಗಿಯೇ, ತನ್ನ ಭಗ್ನ ಪ್ರಣಯದ ಪ್ರತೀಕಾರದ ಬಗ್ಗೆ ಬಗೆಬಗೆಯಾದ ಯೋಜನೆಗಳನ್ನು ಮಾಡುತ್ತಾ, ಆ ಪ್ರಕ್ಷುಬ್ಧತೆಯಿಂದ ಉದ್ಭವವಾದ ಕ್ರೋಧವನ್ನು, ತನ್ನನ್ನು ಹೊತ್ತ ಬಡಪಾಯಿ ಕುದುರೆ, ತನ್ನೊಂದಿಗೆ ಬಂದ ಸಂಗಡಿಗರ ಮೇಲೆ ತೀರಿಸುತ್ತಾ, ನಾಗಾಲೋಟದಲ್ಲಿ ತಳಕಿಗೆ ಬಂದು ಸೇರಿದ ಜುಲ್‌ಫಿಕಾರ್ ಖಾನ್.

ಅವನು ಪಾಳಯವನ್ನು ಸಮೀಪಿಸುತ್ತಿದ್ದ ಹಾಗೇ ಮುಗಿಲಿನಲ್ಲಿ, ಚೀತ್ಕರಿಸುತ್ತಾ ಕಿಕ್ಕಿರಿದ ಹದ್ದುಗಳ ಪಡೆಯನ್ನು ಕಂಡೇ, ಇರುಳೆಲ್ಲಾ ಘೋರ ಸಂಗ್ರಾಮ ನಡೆದಿರಬೇಕೆಂದು ಊಹಿಸಿದ ಜುಲ್‌ಫಿಕಾರ್ ಖಾನ್, ಮೊಗಲರ ಪಾಳಯದಲ್ಲಿನ್ನೂ ಅರ್ಧ ಚಂದ್ರಾಂಕಿತ ಹಸಿರು ನಿಶಾನೆ ಹಾರಾಡುತ್ತಿದ್ದುದನ್ನು ಕಂಡು, ಮನಸ್ಸಿಗೆ ಕೊಂಚ ಧೈರ್ಯ ತಂದುಕೊಂಡು, ಖಾಸಿಂಖಾನನ ಗುಡಾರದತ್ತ ತನ್ನ ಕುದುರೆಯನ್ನು ದೌಡಾಯಿಸಿದ.

ದುರ್ಗಕ್ಕೆ ಹೋದ ಜುಲ್‌ಫಿಕಾರ್ ಖಾನ್ ಹಿಂದಿರುಗಿ ಬರುವುದನ್ನೇ, ಇರುಳೆಲ್ಲಾ ಜಾಗರಣೆ ಮಾಡಿ, ಕಣ್ಣಿಗೆ ಕಣ್ಣು ಹಚ್ಚದೆ ಕಾಯುತ್ತಿದ್ದ ಖಾಸಿಂಖಾನ್, ಜುಲ್‌ಫಿಕಾರ್ ಖಾನನ ಮುಖವನ್ನು ಕಾಣುತ್ತಿದ್ದ ಹಾಗೇ, ಥಟ್ಟನೆ ಎದ್ದು ನಿಂತು, ಉತ್ಕಂಠಿತನಾಗಿ —

"ನೀನು ಹೋದ ಕೆಲಸ ಏನಾಯಿತು ಜುಲ್‌ಫಿಕಾರ್ ?"

—ಎಂದು ಕೇಳಿದ.

"ಆ ಬಗ್ಗೆ ಖಾವಂದರವರು ಚಿಂತಿಸಬೇಕಾದ ಕಾರಣವೇನೂ ಇಲ್ಲ. ದುರ್ಗದ ರಾಜಾಸಾಹೇಬರು ತಮ್ಮ ಮಾತಿನಂತೆಯೇ ನಡೆದುಕೊಳ್ಳುವುದಾಗಿ ಹೇಳಿ, ಈ ದಿನವೇ ತಮ್ಮ ಸೈನ್ಯವನ್ನು ಕಳುಹಿಸುವುದಾಗಿ ಹೇಳಿದರು."

"ಇಷ್ಟು ದಿನ ಏಕೆ ತಡ ಮಾಡಿದರಂತೆ ಆ ನಮ್ಮಕ್ ಹರಾಮರು...."

ಬಕ್ಷರು, ಇಲ್ಲಿ ಮರಾಟರನ್ನು ಎದುರಿಸುವ ಹೊಣೆಗಾರಿಕೆಯನ್ನು ಒಪ್ಪಿಕೊಂಡರೆ ನಾನು ಈ ದಿನವೇ, ಮತ್ತೆ ಮರಾಟರು ದಾಳಿ ಮಾಡಿ ಬೊಕ್ಕಸವನ್ನು ವಶಪಡಿಸಿಕೊಳ್ಳಲು ಅವಕಾಶ ಕೊಡದೆ, ಆ ಹಣದೊಂದಿಗೆ ಸೀರ್ಯಕ್ಕೆ ಹೋಗಲು ನಿರ್ಧರಿಸಿದ್ದೇನೆ...."

"ಈ ಯೋಚನೆಗೆ ದಿಲಾವರ್ ಬಕ್ಷರು ಏನು ಹೇಳಿದರು ?"

"ಅವರೇನೋ ನನ್ನ ಯೋಚನೆಗೆ ಒಪ್ಪಿ, ತಮ್ಮ ಪಾಲಿನ ಕರ್ತವ್ಯ ಮಾಡುವುದಾಗಿ ಹೇಳಿದರು."

"ನನಗಿಂತಲೂ ಹಿರಿಯರಾದ ಅವರು ಒಪ್ಪಿದ ಮೇಲೆ ನನ್ನದೇನೂ ಅಭ್ಯಂತರವಿಲ್ಲ."

—ಎಂದ ಜುಲ್‌ಫಿಕಾರ್ ಖಾನ್.

ತನ್ನ ವ್ಯವಸ್ಥೆಗೆ ಪಾಳಯದ ಮುಖ್ಯ ಸರದಾರರು ಒಪ್ಪಿದ ಬಳಿಕ ಖಾಸಿಂಖಾನ್, ಅವರಿಗೆ ಹೇಳಬೇಕಾದುದನ್ನೆಲ್ಲಾ ಹೇಳಿ, ಐನೂರು ಮಂದಿ ಅಶ್ವಾರೋಹಿಗಳ ಕಾವಲು ಪಡೆಯಲ್ಲಿ ತಳಕಿನಿಂದ ಸೀರ್ಯದತ್ತ ಹೊರಡಲು ನಿಶ್ಚಯಿಸಿದ.

೫

ಬೊಕ್ಕಸದ ರಕ್ಷಣೆಯ ಬಗ್ಗೆ ಖಾಸಿಂಖಾನ್ ಏನು ಯೋಚನೆ ಮಾಡಿದ್ದನೋ, ಆತ ಅದೇ ಯೋಚನೆಯನ್ನೇ ಮಾಡಬಹುದೆಂದು ಸಂತೋಜಿ ಘೋರ್ಪಡೆ ನಿರ್ಧರಿಸಿದ್ದ !

ಹಿಂದಿನ ರಾತ್ರಿ, ಸಂತೋಜಿ ಘೋರ್ಪಡೆ ಸೀರ್ಯದವರ ಪಾಳಯದ ಮೇಲೆ, ಅನಿವಾರ್ಯಕವಾದ ದಾಳಿಯನ್ನು ಮಾಡಿದುದರ ಉದ್ದೇಶವೇ ಅದಾಗಿತ್ತು.

ಖಾಸಿಂಖಾನ್ ಊಹಿಸಿದಂತೆ ಸಂತೋಜಿ ಘೋರ್ಪಡೆಯ ದಾಳಿಯ ಉದ್ದೇಶ, ಆ ಭಾಗದಲ್ಲಿ ರಾಜ್ಯಸ್ಥಾಪನೆ ಮಾಡುವುದಾಗಲಿ, ಆ ಪ್ರಾಂತದಲ್ಲಿ ಮೊಗಲರ ಅಧಿಕಾರಶಾಹಿಯನ್ನು ಮುರಿಯುವುದಾಗಲಿ ಆಗಿರಲಿಲ್ಲ —

ಅವನ ಉದ್ದೇಶ ಆದಷ್ಟು ಲೂಟಿ ಮಾಡುವುದು.

ಹಲವಾರು ಪಾಳಯ ಪಟ್ಟುಗಳ ನಡುವೆ, ಹರಿದು ಹಂಚಿ ಹೋಗಿ, ಪರಸ್ಪರ ಕಲಹದಿಂದ ದುರ್ಬಲವಾಗಿದ್ದ ಈ ಸೀಮೆಯನ್ನು ತನ್ನ ಅತಿ ವೇಗ ವಾಗಿ ಚಲಿಸಬಲ್ಲ ಸೇನೆಯ ಸಹಾಯದಿಂದ ಲೂಟಿ ಮಾಡುವುದು; ದುರ್ಬಲ ರಾದವರನ್ನು ವಿನಾಶ ಮಾಡುವುದು, ಬಲಶಾಲಿಗಳಾದವರೊಂದಿಗೆ ತಾನು ಹಿಂದೂ ಮತರಕ್ಷಕ ಎಂದು ಸೋಗು ಹಾಕಿ, ಅವರ ಸಹಾಯದಿಂದ ಮೊಗಲರ ಸೇನೆಗೆ ಲೂಟಿ ಮಾಡುವುದು, ಅದು ಸಾಧ್ಯವಿಲ್ಲದಿದ್ದಾಗ, ಅಲ್ಲಿಯ ಸ್ಥಳೀಯ ರಾಜಕೀಯದಲ್ಲಿ ತಲೆಹಾಕಿ, ಅವರ ಪರಸ್ಪರ ವೈಷಮ್ಯವನ್ನು ತನ್ನ ಲಾಭಕ್ಕೆ ಬಳಸಿಕೊಳ್ಳುವುದು —

ಇದು ಸಂತೋಜಿ ಘೋರ್ಪಡೆಯ ದಂಡೆಯಾತ್ರೆಯ ಮೂಲಭೂತ ಉದ್ದೇಶ.

ಈ ಬಗೆಯ ರಾಕ್ಷಸೀ ಧನದಾಹದಿಂದ ಪ್ರೇರೇಪಿತನಾದ ಸಂತೋಜಿ ಘೋರ್ಪಡೆಯ ದೈತ್ಯಸೇನೆಯ ವಿರುದ್ಧ ಮಲೆತು ನಿಂತವರು ಧೂಳಿಪಟ ವಾದಂತೆಯೇ, ಅವನ ಸ್ನೇಹ ಬಯಸಿದವರೂ, ಬಹುಬೇಗ, ಅವನ ಸ್ನೇಹವೂ ಸುಲಿಗೆಯ ಮುಖವಾಡವೆಂಬುದನ್ನು ಅರಿತುಕೊಳ್ಳುತ್ತಿದ್ದರು.

ಆದರೆ ಪರಸ್ಪರ ದ್ವೇಷಾಸೂಯೆಯಲ್ಲಿ ನಿರತರಾಗಿ, ತಮ್ಮ ಎರಡು ಕಣ್ಣು ಹೋದರೂ ಶತ್ರುವಿನ ಒಂದು ಕಣ್ಣಾದರೂ ಹೋಗಲಿ ಎಂಬಂಥ ಮಬ್ಬಿಗೆ ಬಿದ್ದ ಪಾಳಯಗಾರರಿಗೆ, ಈ ಸಂತೋಜಿ ಘೋರ್ಪಡೆ, ಸುಟ್ಟ ಮನೆಯನ್ನಷ್ಟೇ ಅಲ್ಲ, ಅಟ್ಟ ಮನೆಯನ್ನೂ ಉರಿಸುವ ಬೆಂಕಿ ಎಂಬ ಅರಿವಿರಲಿಲ್ಲ. ಹೀಗಾಗಿ–

ಜನ ಸಾಮಾನ್ಯದ ಕರುಣಾಕ್ರಂದನಕ್ಕೆ ಕಿವುಡಾದ, ಪಾಳಯಗಾರರ ವೈಯಕ್ತಿಕ ಅಧಿಕಾರಲಾಲಸೆಯ ಮರೆಯಲ್ಲಿ, ಸಂತೋಜಿ ಘೋರ್ಪಡೆಯ

ಭಗವಾ ಝುಂಡಾದ ಪಿಶಾಚ ಪ್ರಳಯ ನೃತ್ಯ ನಡೆದಿತ್ತು.

ರಾಯದುರ್ಗದ ಪಾಳಯಗಾರನೂ ಇದೇ ಬಗೆಯ ಕ್ಷುಲ್ಲಕ ದ್ವೇಷಾಂಧ ಪಾಳಯಗಾರರ ಗುಂಪಿಗೆ ಸೇರಿದವನು. ಚಿತ್ರದುರ್ಗದ ಪಾಳಯಗಾರರ ಆಜನ್ಮ ವೈರಿಯಾದ ಆತ, ಸೀರ್ಯದ ಸೇನೆಯನ್ನು ಸದೆಬಡಿದ ಬಳಿಕ, ಸಂತೋಜಿ ಘೋರ್ಪಡೆ ಚಿತ್ರದುರ್ಗದ ಮೇಲೆ ದಾಳಿ ಮಾಡಬೇಕೆಂಬ ಉದ್ದೇಶದಿಂದ ಸಂತೋಜಿಯ ಪಿಶಾಚಪಡೆಗೆ ಆಶ್ರಯವನ್ನು ಕೊಟ್ಟಿದ್ದ.

ಆ ಬಯಕೆಯಿಂದ ಅವನು ತನ್ನನ್ನು ನಂಬಿದ್ದ ಸೀರ್ಯದವರಿಗೂ ದ್ರೋಹ ಬಗೆಯಲು ಸಿದ್ಧನಾಗಿದ್ದ—

ಒಮ್ಮೆ ಸಂತೋಜಿಯ ಸೇನೆ ಈ ಪ್ರಾಂತದಿಂದ ಹೋದ ಬಳಿಕ ತಾನೇ, ದುರ್ಗ, ಸೀರ್ಯ ಎಲ್ಲಕ್ಕೂ ಅಧಿಕಾರಿಯಾಗಬಹುದೆಂಬ ಆಲೋಚನೆಯಿಂದ.

ರಾಯದುರ್ಗದ ಪಾಳಯಗಾರನಿಗಿದ್ದ ಈ ಕನಸುಗಳನ್ನು ಅವನಿಗಾಗಿ ಕಟ್ಟಿಕೊಟ್ಟವನೂ ಸಂತೋಜಿ ಘೋರ್ಪಡೆಯೇ.

ಹೀಗೆ ಬಗೆಬಗೆಯಲ್ಲಿ ರಾಯದುರ್ಗ, ಅದರ ಸಮೀಪದ ಪಾಳಯಗಾರರನ್ನು, ಮರುಳು ಮಾಡಿದ ಸಂತೋಜಿ, ಮುಂದೆ ತಾನು ಅಪಹರಿಸಬೇಕೆಂಬ ಉದ್ದೇಶದಿಂದಲೇ, ಆ ಪಾಳಯಗಾರರೆಲ್ಲರೂ, ಸೀರ್ಯದ ದಿವಾನ್-ಫೌಜುದಾರನಿಗೆ ಪೊಗದಿಯ ಹಣವನ್ನು ಕಳುಹಿಸಲು ಪ್ರೇರೇಪಿಸಿದ್ದ—ಅದನ್ನು ನಿಮಗೆ ಹಿಂತಿರುಗಿಸುತ್ತೇನೆ ಎಂದು ಹೇಳಿ. ಹೀಗೆ ಬಗೆಬಗೆಯ ಆಶ್ವಾಸನ, ಮರುಳು ಮಾತುಗಳಿಂದ ಅವರಾರೂ ತನ್ನ ವಿರೋಧಿಗಳಾಗುವುದಿಲ್ಲ, ತನ್ನ ಬೆನ್ನಲ್ಲಿ ಬಗೆಯುವುದಿಲ್ಲ ಎಂಬುದನ್ನು ಖಚಿತಪಡಿಸಿಕೊಂಡು, ಸಂತೋಜಿ ಘೋರ್ಪಡೆ, ತನ್ನ ಧಾಳಿಯ ವೆಚ್ಚಕ್ಕೆ ಆ ಪಾಳಯಗಾರರಿಂದಲೇ ಹಣ ಪಡೆದು, ತನಗೆ ಅಪರಿಚಿತವಾದ ಆ ಸೀಮೆಯ ಬಗ್ಗೆ ತನಗೆ ಬೇಕಾದ ಎಲ್ಲ 'ಮಾಹಿತಿ'ಗಳನ್ನೂ ಆ ಪಾಳಯಗಾರರಿಂದಲೇ ಪಡೆದು, ಸೀರ್ಯದವರ ಪಾಳಯದ ಮೇಲೆ ತನ್ನ ದಾಳಿಯ ಯೋಜನೆಯನ್ನು ಸಿದ್ಧಪಡಿಸಿದ್ದ. ಅವನ ಯೋಜನೆ ಹೀಗಿತ್ತು.

ಕೊನೆಯಲ್ಲಿ ಈ ಮೂರ್ಖ ಪಾಳಯಗಾರರ ಕಣ್ಣಲ್ಲಿ ಮಂಕುಬೂದಿ ಎರಚುವುದೇ ತನ್ನ ಉದ್ದೇಶವಾದುದರಿಂದ, ತನ್ನ ದ್ರೋಹಚಿಂತನೆಯನ್ನು ಎಂದಾದರೂ ಬಯಲು ಮಾಡಬಹುದಾದ ಅವರ ಸೇನೆಯ ನೆರವನ್ನು ಕೇಳಬಾರದು. ತಾನೇ ಅವರ ಉದ್ಧಾರಕರ್ತನೆಂಬಂತೆ ನಟಿಸಿ, ಅವರಿಗಾಗಿ ತಾನು ಈ ಯುದ್ಧ ಮಾಡುತ್ತಿರುವಂತೆ ನಟಿಸಿ, ಯುದ್ಧದ ಖರ್ಚಿಗಾಗಿ, ಅವರೆಲ್ಲರಿಂದ ಆದಷ್ಟು ಹಣ ಕೇಳುವುದು;

ಅದಾದ ಬಳಿಕ—

ತನ್ನ ಸೇನೆಯನ್ನು ಮೂರು ಗುಂಪುಗಳಾಗಿ ಮಾಡುವುದು; ಒಂದು ಭಾಗದ ಸೇನೆಯ ನಾಯಕತ್ವಕ್ಕೆ ತಾನು; ಒಂದು ಭಾಗಕ್ಕೆ ತುಕೋಜಿ ನಿಂಬಾಳ್ಕರ್, ಮತ್ತೊಂದು ಭಾಗಕ್ಕೆ ಪಹಜಿ ಘೋರಪುರೆಯನ್ನು ನೇಮಿಸುವುದು.

ಈ ಮೂರು ಗುಂಪುಗಳಲ್ಲಿ, ನಿಂಬಾಳ್ಕರನ ನೇತೃತ್ವಕ್ಕೆ ಒಳಪಡಿಸಲ್ಪಟ್ಟ ಸೇನೆ, ತಳಕಿನಲ್ಲಿ ಬೀಡು ಬಿಟ್ಟ ಸೀರ್ಯದವರ ಪಾಳಯದ ಮೇಲೆ ಮಿಂಚಿನ ವೇಗದ ದಾಳಿ ಮಾಡಬೇಕು. ಆ ದಾಳಿಯ ಉದ್ದೇಶ ಸೀರ್ಯದವರನ್ನು ಗೆಲ್ಲುವುದಲ್ಲ, ಅವರಲ್ಲಿ ಆದಷ್ಟು ಭಯ ಹುಟ್ಟಿಸುವುದು; ಆದಷ್ಟು ಅನಾಹುತ ಮಾಡಿ, ಕಣ್ಮರೆಯಾಗುವುದು.

ಆ ಅನಿರೀಕ್ಷಿತ ದಾಳಿಯಿಂದ ಗಾಬರಿಗೊಂಡ ಸೀರ್ಯದ ದಿವಾನ್ - ಫೌಜುದಾರ ಮರಾಟರನ್ನು ಎದುರಿಸುವುದಕ್ಕಿಂತ ಹೆಚ್ಚಾಗಿ, ತನ್ನ ಬಳಿ ಸಂಗ್ರಹವಾದ ಹಣದ ರಕ್ಷಣೆಯ ಯೋಚನೆ ಮಾಡುತ್ತಾನೆ.

ಆ ರಕ್ಷಣೆಗೆ ಇರುವ ದಾರಿ ಒಂದೇ – ಆದಷ್ಟು ಬೇಗ ಸಮರಾಂಗಣ ದಿಂದ ಆ ಹಣವನ್ನು ಸೀರ್ಯಕ್ಕೆ ಸಾಗಿಸುವುದು.

ತಳಕಿನಿಂದ ಸೀರ್ಯಕ್ಕೆ ಹೋಗಲು ಇದ್ದ ದಾರಿಗಳು ಎರಡು—

ಒಂದು ಚಳ್ಳಕೆರೆ, ಎರಬಳ್ಳಿ, ಹಿರಿಯೂರುಗಳ ಮಾರ್ಗವಾಗಿ ಸೀರ್ಯ ವನ್ನು ಸೇರುವುದು. ಮತ್ತೊಂದು ಘಟಪರ್ತಿ, ಜಾಜೂರು, ಸಿದ್ದೇಶ್ವರನ ದುರ್ಗ, ನಿಡುಗಲ್ಲು, ಅಮರಾಪುರ, ಮಡಕಶಿರಾ, ರತ್ನಗಿರಿಗಳ ಮಾರ್ಗವಾಗಿ ಸೀರ್ಯವನ್ನು ಸೇರುವುದು.

ಈ ಎರಡು ಮಾರ್ಗಗಳಲ್ಲಿ, ಮರಾಟರ ಅನಿರೀಕ್ಷಿತ ದಾಳಿಯಿಂದ ಭಯ ಭ್ರಾಂತನಾಗಿ, ಆದಷ್ಟು ಬೇಗ ಸೀರ್ಯವನ್ನು ಸೇರಲೆಳಸುವ ದಿವಾನ್ - ಫೌಜುದಾರ, ಸುತ್ತು ಬಳಸಿ ಘಟಪರ್ತಿ, ಸಿದ್ದೇಶ್ವರನ ದುರ್ಗದ ದಾರಿಯನ್ನು ಹಿಡಿಯದೆ, ನೇರವೂ ಸಮೀಪವೂ ಆದ ಚಳ್ಳಕೆರೆ, ಎರಬಳ್ಳಿಗಳ ಹಾದಿಯನ್ನು ಹಿಡಿಯಬಹುದೆಂದು ಊಹಿಸಿ, ಸಿದ್ದೇಶ್ವರನ ದುರ್ಗದ ದಾರಿಯನ್ನು ಕಾಯಲು, ಸಹಜಿ ಘೋರಪಡೆಯನ್ನು ನೇಮಿಸಿ, ತಾನು ಚಳ್ಳಕೆರೆಯ ಮಾರ್ಗದಲ್ಲಿ ಕಾದಿರು ವುದು ಎಂದು ನಿಶ್ಚಯಿಸಿದ.

ಆ ಯೋಜನೆಯಂತೆ, ಬೊಮ್ಮಗೊಂಡನ ಹಳ್ಳಿಯವರೆಗೂ ಏಕ ಪ್ರವಾಹ ವಾಗಿ ಬಂದ ಸಂತೋಜಿ ಘೋರ್ಪಡೆಯ ಸೇನೆ, ಬೊಮ್ಮಗೊಂಡನ ಹಳ್ಳಿಯ ಮೊಗಲ ಠಾಣ್ಯವನ್ನು ನಿರ್ಮೂಲಗೊಳಿಸಿದ ಬಳಿಕ, ಮೂರು ಸೀಳಾಗಿ ಕವಲು ಒಡೆದು, ಸಹಜಿಯನ್ನು ನಾಗಸಮುದ್ರ, ಮನ್ನೆಕೋಟೆ, ಘಟಪರ್ತಿಗಳ ಮಾರ್ಗವಾಗಿ ಸಿದ್ದೇಶ್ವರನ ದುರ್ಗದ ದಾರಿಯನ್ನು ಕಾಯಲು ಕಳಿಸಿ, ನಿಂಬಾಳ್ಕರನಿಗೆ ನೇರವಾಗಿ ತಳಕಿನ ಪಾಳ್ಯದ ಮೇಲೆ ದಾಳಿ ಮಾಡಲು ಹೇಳಿ,

ತಾನು ಅಡ್ಡ ದಾರಿ ಹಿಡಿದು, ಹಿರೇಹಳ್ಳಿ, ಕೋಡಿಹಳ್ಳಿಗಳ ಮಾರ್ಗವಾಗಿ, ಸೀರ್ಯದ ಸೇನೆ ನಿಂಬಾಳ್ಕರನೊಂದಿಗೆ ಯುದ್ಧದಲ್ಲಿ ನಿರತವಾಗಿದ್ದಾಗ, ಆ ಗದ್ದಲದಲ್ಲಿ ಅವರ ಪಾಳಯವನ್ನು ಬಳಸಿಕೊಂಡು, ಅವರ ಹಿಂಭಾಗದಲ್ಲಿ ಸುಮಾರು ಎರಡು ಮೂರು ಮೈಲಿಗಳ ಅಂತರದಲ್ಲಿ ಚಿಕ್ಕಣ್ಣನ ಹಳ್ಳಿಯ ಬಳಿ, ಈಚಲು ಮರಗಳ ಕಾಡಿನ ಮರೆಯಲ್ಲಿ ತನ್ನ ಸೇನೆಯನ್ನು ನಿಲ್ಲಿಸಿಕೊಂಡು ಕಾಯುತ್ತಿದ್ದ ಸಂತೋಜಿ ಘೋರ್ಪಡೆ.

ಸಂತೋಜಿಯ ಶನಿ ತಂತ್ರವನ್ನು ತಿಳಿಯದ ಖಾಸಿಂಖಾನ್, ಹಗಲಿನ ಬೆಳಕಿನಲ್ಲಿಯೇ ತನ್ನ ಭಂಡಾರವನ್ನು ಪಾಳಯದಿಂದ ಸಾಗಿಸುವ ಯೋಚನೆ ಮಾಡಿ, ತಾನಾಗಿಯೇ ಸಂತೋಜಿ ಬೀಸಿದ ಬಲೆಯಲ್ಲಿ ಬೀಳಲು ಹೊರಟಿದ್ದ.

* * * *

ಚಿತ್ರದುರ್ಗದಿಂದ ಸೀರ್ಯದವರ ಸಹಾಯಕ್ಕೆ ಹೊರಟ ಸೇನೆ, ಕುರುಬನ ಹಳ್ಳಿ ಕಣಿವೆ, ಕಲ್ಲಹಳ್ಳಿಯ ಕಣಿವೆಗಳನ್ನು ದಾಟಿ, ಎಲ್ಲಿಯೂ ವಿಶ್ರಾಂತಿ ತೆಗೆದುಕೊಳ್ಳದೆ ಚಳ್ಳಕೆರೆಯನ್ನು ಮಧ್ಯಾಹ್ನದ ವೇಳೆಗೆ ಪ್ರವೇಶಿಸಿ, ಕರಿಕಲ್ಲು ಗುಡ್ಡಗಳ ಮರೆಯ, ದಟ್ಟವಾಗಿ ಈಚಲು, ಹುಣಿಸೆ, ಬೇವಿನ ಮರಗಳು ಬೆಳೆದ ಕಿರುಕಾಡಿನ ನೆರಳಿನಲ್ಲಿ ವಿಶ್ರಾಂತಿ ಪಡೆಯಲು ನಿಂತಿತು.

ಗುಡ್ಡದ ಕೆಳಭಾಗದಲ್ಲಿದ್ದ ಕೆರೆಯಲ್ಲಿ ಕುದುರೆಗಳಿಗೆ ನೀರು ಕುಡಿಸಿ, ಕುದುರೆಗಳೂ, ಅವುಗಳೊಂದಿಗೆ ಸೈನಿಕರೂ ತಮ್ಮ ಮಾರ್ಗಾಯಾಸವನ್ನು ಪರಿಹರಿಸಿಕೊಂಡ ಬಳಿಕ, ಹೊಳಲಕೆರೆಯ ಬೊಮ್ಮಣ್ಣ, ಕುಡುತನಿಯ ವೆಂಕಣ್ಣ, ಜಾರ್ ಡ್ಯುವೋರೋ – ಮೂವರೂ ಕುಳಿತು, ಮುಂದೆ ಏನು ಮಾಡಬೇಕೆಂದು ಆಲೋಚಿಸಿದರು.

ತಾವು ನಿಂತ ಎಡೆಯಿಂದ ತಳಕಿಗೆ ಕೇವಲ ಒಂದು ಗಾವುದ ದೂರ ಎಂಬುದನ್ನು ಕೇಳಿ, ಸಂತೋಜಿ ಘೋರ್ಪಡೆ ತನಗೆ ಅಷ್ಟು ಸಮೀಪದಲ್ಲಿರುವು ದನ್ನರಿತು ಜಾನ್ ಡ್ಯುವೋರೋನ ಹೃದಯದಲ್ಲಿ ಸಮರೋತ್ಸಾಹ ವಿಜೃಂಭಿಸಿತು. ಅವನಲ್ಲಿನ ಉತ್ಸಾಹವೇ ಉಳಿದ ದಳಪತಿಗಳಲ್ಲೂ ಇತ್ತು. ಆದರೆ ಅವರಾರೂ ತಮ್ಮ ಉತ್ಸಾಹದಲ್ಲಿ ವಿವೇಚನೆಯನ್ನು ಕಳೆದುಕೊಳ್ಳದೆ, ಯಾವ ಗಳಿಗೆಯಲ್ಲಾದರೂ ತಾವು ಸಮರ ಪ್ರವೇಶ ಮಾಡುವ ಪ್ರಸಂಗ ಒದಗಬಹುದಾದುದರಿಂದ, ಸೇನೆಗಳಿಗೆ ನೀರು-ನಿಡಿಗೆ ಅನುಕೂಲವಾಗಿದ್ದು, ಸೇನೆಗೆ ಮರೆಯನ್ನೂ ಒದಗಿಸಿದ ಆ ಪ್ರದೇಶದಲ್ಲಿಯೇ ಸೇನೆಯನ್ನು ನಿಲ್ಲಿಸಿ, ತಾವು ಅಲ್ಲಿಗೆ

ಬಂದಿರುವ ಸುದ್ದಿಯನ್ನು ಚಾರರ ಮೂಲಕ ಖಾಸಿಂಖಾನನಿಗೆ ತಿಳಿಸಲು ನಿರ್ಧರಿಸಿ, ಆ ನಿರ್ಧಾರದ ಪ್ರಕಾರ ಇಬ್ಬರು ಅಶ್ವಾರೋಹಿಗಳನ್ನು, ಖಾಸಿಂ ಖಾನನ ಪಾಳಯಕ್ಕೆ ಅಟ್ಟಿದರು.

೬

ಮಧ್ಯಾಹ್ನದ ಉರಿಬಿಸಿಲು, ಬಯಲಿನಲ್ಲಿ ಅಲೆಅಲೆಯಾಗಿ ತೇಲುತ್ತಿತ್ತು.

ರಾಜಮಾರ್ಗದ ಇಬ್ಬದಿಯಲ್ಲೂ ಬೆಳೆದ ಹುಣಿಸೆ, ಬೇವು, ಆಲ, ಜುವ್ವೆಯ ಮರಗಳ ಅಡಿಯಲ್ಲಿನ ನೆರಳನ್ನು ಸೂರ್ಯಕಿರಣಗಳು ಕತ್ತರಿಸಿ, ಅವನ್ನು ಶತಭಿನ್ನವಾಗಿ ಮಾಡಿದ್ದವು.

ಸಮೀಪದಲ್ಲಿಯೇ ಸಮರಪಾಳಯವಿದ್ದುದರಿಂದ, ರಾಜಮಾರ್ಗದ ಸಮೀಪದಲ್ಲಿದ್ದ ಹಳ್ಳಿಯ ಜನರಾರೂ ಪ್ರಯಾಣದ ಸಾಹಸ ಮಾಡಲು ಮನ ಮಾಡದುದರಿಂದ, ರಾಜಮಾರ್ಗವೂ ವಿಜನವಾಗಿದ್ದಿತು. ಅಲ್ಲೊಂದು ಇಲ್ಲೊಂದು ಒಂಟಿ ಹಕ್ಕಿಗಳ ಕೂಗು, ದೂರದಲ್ಲೆಲ್ಲೋ ಈಚಲು ವನಗಳಲ್ಲಿ ಕುರಿ ಕಾಯುತ್ತಿದ್ದವರ ಕುರಿಗಳನ್ನು ಎಚ್ಚರಿಸುವ ಕೂಗು ಬಿಟ್ಟರೆ ಮತ್ತಾವ ಸದ್ದೂ ಕೇಳಿಬರದೆ, ನಡುಹಗಲಲ್ಲೂ, ನಡುರಾತ್ರಿಯ ಮೌನ ಬಯಲನ್ನು ವ್ಯಾಪಿಸಿತ್ತು.

ತಳಕಿನ ಪಾಳಯದಿಂದ ರಾಜಭಂಡಾರದೊಂದಿಗೆ ಹೊರಟ ಸೀರ್ಯ ದವರ ಪಡೆಯ ಸುಮಾರು ಮುನ್ನೂರು ಮಂದಿ ಅಶ್ವಾರೋಹಿ ಸೈನಿಕರು, ಅನಾತುರವಾಗಿ ರಾಜಮಾರ್ಗವನ್ನು ಕ್ರಮಿಸುತ್ತಿದ್ದರು.

ಆ ಪಡೆಯ ಮುಂಭಾಗದಲ್ಲಿ, ಆಲಂಗೀರ್ ಬಾದಷಹರ ರಾಜಧ್ವಜ ವನ್ನು ಧರಿಸಿದ, ಅಶ್ವಾರೋಹಿಯಾದ ಧ್ವಜಧಾರಿ ನಡೆಯುತ್ತಿದ್ದ. ಅವನ ಹಿಂಬದಿಯಲ್ಲಿ ಸುಮಾರು ನೂರು ಜನ ಸೈನಿಕರು, ಐದೈದು ಜನರ ಸಾಲಾಗಿ ದ್ದರು. ಅವರ ಹಿಂದೆ, ರಾಜಮುದ್ರೆಗಳಿಂದ ಬಂಧಿತವಾದ, ಬಲವಾದ ಕಬ್ಬಿಣದ ಪಟ್ಟಿಗಳು ಬಿಗಿದ, ಮರದ ಪೆಠಾರಿಗಳನ್ನು ಹೊತ್ತ ಎತ್ತಿನ ಬಂಡಿ.

ಆ ಬಂಡಿಯ ಹಿಂಭಾಗದಲ್ಲಿ ನೂರು ಜನ ಸೈನಿಕರೂ, ಅದರ ಇಬ್ಬದಿಯಲ್ಲಿ ಐವತ್ತು ಐವತ್ತು ಜನ ಸೈನಿಕರೂ, ಬೊಕ್ಕಸದ ಕಾವಲುಗಾರರಾಗಿದ್ದರು.

ಹಮೀದುಲ್ಲಾ ಬೇಗ್ ಆ ಪಡೆಯ ನಾಯಕತ್ವವನ್ನು ವಹಿಸಿದ್ದ.

ಈ ದಳಕ್ಕೆ ಮುಂಚೂಣಿಯಾಗಿ, ಐವರು ಅಶ್ವಾರೋಹಿಗಳ ತುಕಡಿಯೊಂದಿತ್ತು. ಅದು ಪಡೆಗಿಂತಲೂ ಮುಂದಾಗಿ, ವೇಗವಾಗಿ ಚಲಿಸುತ್ತಾ, ಮಾರ್ಗ ನಿರಾಪದವಾಗಿದೆಯೋ ಇಲ್ಲವೋ ಎಂಬ ಸೂಚನೆಯನ್ನು ಕೊಡುತ್ತಿತ್ತು.

ಮಧ್ಯಾಹ್ನದ ಉರಿಬಿಸಿಲಿನಲ್ಲಿ, ಸೈನಿಕರು ಧರಿಸಿದ ಲೋಹ ಕವಚಗಳೂ, ಶಿರಸ್ತ್ರಾಣಗಳೂ, ಬಗೆಬಗೆಯ ಆಯುಧಗಳೂ, ನೋಡುವವರ ಮನದಲ್ಲಿ, ಭೀತಿಯನ್ನು ಮೂಡಿಸಿ, ಥಳಥಳಿಸುತ್ತಿದ್ದವು.

ಸೈನಿಕರೂ ಮೌನವಾಗಿ ನಡೆಯುತ್ತಿದ್ದುದರಿಂದ. ನಡುಹಗಲಿನಲ್ಲಿ ಕವಿದ ಅಸಹಜ ಮೌನದಲ್ಲಿ ಅವರ ಕುದುರೆಗಳ ಖುರಪುಟದ ಸದ್ದು, ಆಗೊಮ್ಮೆ ಈಗೊಮ್ಮೆ, ಚಲನೆಯಲ್ಲಿ ಅವರ ಮೈಗೆ ತಾಗುವ ಶಸ್ತ್ರಗಳ ಖಣಿಲು - ಖಣಿಲೆಂಬ ಲೋಹಶಬ್ದ, ಎತ್ತಿನ ಬಂಡಿಯ ಗಾಲಿಗಳ ಶಬ್ದವೂ ಮತ್ತಷ್ಟು ಹಿರಿದಾಗಿ ಕೇಳಿ ಬರುತ್ತಿತ್ತು

ಮಧ್ಯಾಹ್ನದ ವೇಳೆಗೆ, ತಳಕಿನ ಪಾಳಯದಿಂದ ಹೊರಟ ಪಡೆ, ತಾನು ರಕ್ಷಿಸುತ್ತಿದ್ದ ಬೊಕ್ಕಸವನ್ನು ಹೊತ್ತ ಎತ್ತಿನ ಬಂಡಿಯ ವೇಗಕ್ಕೆ ಅನುಗುಣವಾದ ವೇಗದಲ್ಲಿ ನಡೆಯುತ್ತಾ, ವಿಶೇಷವಾದ ಏರಿಳಿವುಗಳಿಂದ ಕೂಡಿದ ರಾಜಮಾರ್ಗದಲ್ಲಿ, ಗಿರಿಯಮ್ಮನ ಹಳ್ಳಿ, ಚಿಕ್ಕಮ್ಮನ ಹಳ್ಳಿಯನ್ನು ದಾಟಿ, ಬುಡ್ಡನ ಹಟ್ಟಿಯನ್ನು ಸಮೀಪಿಸಿತು.

ಪಡೆ, ಇಷ್ಟುದೂರ ಬರುವವರೆಗೂ ಯಾವ ಅಪಾಯ ಸೂಚನೆಯೂ ಕಾಣದಿದ್ದುದನ್ನು ಕಂಡ ಹಮೀದುಲ್ಲಾ ಬೇಗನ ಮನಸ್ಸಿಗೆ ಕೊಂಚ ನಿರಾತಂಕವಾಯಿತು. ತನ್ನ ಸೇನೆ ಚಳ್ಳಕೆರೆಯನ್ನು ತಲುಪುವ ವೇಳೆಗೆ. ಅಲ್ಲಿಗೆ ಚಿತ್ರದುರ್ಗದ ಸೇನೆಯೂ ಬಂದಿರಬಹುದೆಂಬ ನಿರೀಕ್ಷೆ ಇದ್ದುದರಿಂದ, ಇನ್ನುಳಿದಿರುವುದೆಲ್ಲಾ ಕೇವಲ ಅರ್ಧ ಗಾವುದ ದೂರವಷ್ಟೆ ಎಂಬ ಭಾವನೆಯಿಂದ ತನ್ನ ಪಡೆಯ ನಡೆಯನ್ನು ನಿಧಾನಗೊಳಿಸಿ, ಮೊದಲಿನ ಎಚ್ಚರವನ್ನು ಮರೆತು ನಡೆಯತೊಡಗಿದ.

ಬುಡ್ಡನ ಹಟ್ಟಿಯ ಬಳಿ, ರಾಜಮಾರ್ಗ ಸಣ್ಣದೊಂದು ಏರನ್ನು ಹತ್ತಿ -

ಬಳಿಕ ತಟಕ್ಕನೆ ಸುದೀರ್ಘವಾದ, ಹೆಚ್ಚು ತಗ್ಗಾಗಿರುವ ಇಳಿಜಾರನ್ನು ಇಳಿದು ಮತ್ತೆ ಮೇಲೇರಿ ಮುಂದುವರಿಯುತ್ತದೆ. ಆದುದರಿಂದ ಏರಿನ ಹಿಂಭಾಗ ದಲ್ಲಿರುವವರಿಗೆ, ಅದರಾಚೆ ಇರುವುದು ಕಾಣುವುದಿಲ್ಲ.

ಹಮೀದುಲ್ಲಾ ಬೇಗನ ಪಡೆ, ಆ ಏರನ್ನು ಹತ್ತಿ, ಇಳುವನ್ನು ನಿಧಾನ ವಾಗಿ ಇಳಿಯುತ್ತಿರುವಾಗ, ಬದಿಯ ಈಚಲು ವನದಿಂದ, ನಾಲ್ಕಾರು ಕೇಕೆಗಳ ಸದ್ದು ಕೇಳಿ ಬಂದು, ಹಮೀದುಲ್ಲಾ ಬೇಗ್, ' ಇದೇನು ಕೇಕೆಗಳು ' ಎಂದು ಅಚ್ಚರಿಪಡುತ್ತಿರುವಾಗಲೇ, ರಸ್ತೆಯ ನಾಲ್ಕೂ ಬದಿಯಿಂದ ' ಹರ ಹರ ಮಹ ದೇವ್ ' ಎಂದು ರಣ ಕೇಕೆಯನ್ನು ಹಾಕುತ್ತಾ ನುಗ್ಗಿದ ಮರಾಟರ ಪಡೆ, ಹಮೀದುಲ್ಲಾನ ಪಡೆಯ ಮೇಲೆ ದಾಳಿ ಮಾಡಿತು.

ಭೀಮಾಕಾರದ ಕರಿಯ ಠಾಕಣವೊಂದರ ಮೇಲೆ ಕುಳಿತ, ಕುದುರೆ ಯಷ್ಟೇ ಭೀಮಾಕಾರದ ಸಂತೋಜಿ ಘೋರ್ಪಡೆ, ಅವನ ನಾಯಕತ್ವದಲ್ಲಿ ನುಗ್ಗಿದ ಸುಮಾರು ಆರುನೂರು ಏಳುನೂರು ಜನ ಸವಾರರ ಪಡೆಯನ್ನು ಕಂಡು ಹಮೀದುಲ್ಲಾನ ಎದೆ ಗಡಗಡ ನಡುಗಿ ಕುಗ್ಗಿದಷ್ಟೇ ವೇಗದಿಂದ, ಸೀರ್ಯದವರ ಬರಿಗನ್ನು ಕೊಚ್ಚಿ ಕೆಡಹುತ್ತಿದ್ದ ಮರಾಟರನ್ನು ಎದುರಿಸಲು ತನ್ನ ಪಡೆಗೆ ಅಪ್ಪಣೆ ಮಾಡಿದ. ಆದರೆ ಮರಾಟರ ಮಿಂಚಿನ ವೇಗದ ದಾಳಿಗೆ ಸಿಲುಕಿ, ಸೀರ್ಯದ ಸೈನಿಕರು ಚೆಲ್ಲಾಪಿಲ್ಲಿಯಾಗಿದ್ದರು. ಅವರು ತಮ್ಮ ಚಿತ್ತದ ದಿಗ್ಭ್ರಮೆಯಿಂದ ಚೇತರಿಸಿಕೊಂಡು, ತಮ್ಮ ಶಸ್ತ್ರಕ್ಕೆ ಕೈ ಹಾಕುವುದ ರೊಳಗಾಗಿ, ಒಬ್ಬನಿಗೆ ನಾಲ್ಕು ಜನ ಸುತ್ತುವರಿದು ಕತ್ತರಿಸಿ ಕೆಡಹುತ್ತಿದ್ದರು. ಸೀರ್ಯದ ಸೈನಿಕರು, ಈ ದಾಳಿಯಿಂದ ತಮ್ಮ ಜೀವವನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿರುವಾಗಲೇ, ಹತ್ತಿಪ್ಪತ್ತು ಜನ ಮರಾಟರು, ಫಿರಂಗಿಗಳಿದ್ದ ಬಂಡಿ ಯನ್ನು ಆಕ್ರಮಿಸಿ, ಅದರ ಸಾರಥಿಯನ್ನು ಕತ್ತರಿಸಿ, ಎತ್ತುಗಳ ಕಾಲನ್ನು ಕಡಿದು, ಆ ಬಂಡಿ ಮುಂದುವರಿಯದಂತೆ ಮಾಡಿದರು.

ಸೀರ್ಯದವರು ಮರಾಟರ ವಿರುದ್ಧ ಎಷ್ಟೇ ಸೆಣಸಲು ಯತ್ನಿಸಿದರೂ, ಅವರಿಗಿಂತಲೂ ಬಹು ಪ್ರಬಲರಾದ ಮರಾಟರ ಇದಿರು ಸೋತು ಕೈ ಯಾಗ ಬೇಕಾಯಿತು. ಎಷ್ಟೋ ಜನ ಭಯದಿಂದಲೇ ನಿಶ್ಶಸ್ತ್ರರಾಗಿ ಪ್ರಾಣ ಕಳೆದು ಕೊಂಡರು. ಯಾರನ್ನೂ ಸೆರೆ ಹಿಡಿಯುವ ಉದ್ದಿಶ್ಯವಿಲ್ಲದ ಸಂತೋಜಿ, ಶರಣಾಗತರಾದವರನ್ನು ಕೊಚ್ಚಿ ಹಾಕುವಂತೆ ಅಪ್ಪಣೆ ಮಾಡಿದ.

ಇದ್ದಕ್ಕಿದ್ದ ಹಾಗೇ ಆರಂಭವಾದ ದಾಳಿ ಅರ್ಧ ಗಂಟೆಯೊಳಗಾಗಿ

ಮುಗಿದು, ಗಾಯಗೊಂಡ ಹಮೀದುಲ್ಲಾ, ಸಾರಥಿಗಳಿಲ್ಲದೆ ಕಣ್ಣು ಕಂಡ ಕಡೆ ಓಡಿಹೋದ ಕುದುರೆಗಳಲ್ಲದೆ, ಸೀರ್ಯದ ಪಡೆಯಲ್ಲಿ ಬೇರಾರೂ ಉಳಿಯಲಿಲ್ಲ.

ರಾಜಮಾರ್ಗ ಮೃತ ಸೈನಿಕರ ಹೆಣಗಳಿಂದ ಕಿಕ್ಕಿರಿದು, ನರಕದ ಹೊಳೆ ಹರಿಯಿತು.

ಈ ಮಾರಣ ಕಾರ್ಯ ಮುಗಿಯುತ್ತಿದ್ದ ಹಾಗೇ, ಸಂತೋಜಿ, ತನ್ನ ಪಡೆಯವರಿಗೆ, ಎತ್ತಿನ ಬಂಡಿಯ ಮೇಲಿನ ಪೆಠಾರಿಗಳನ್ನು ಒಡೆಯಲು ಅಪ್ಪಣೆ ಮಾಡಿದ. ಅದರಂತೆಯೇ ನಾಲ್ಕು ಜನ ಬಲ್ದಡಿಗರು, ಬಲವಾದ ಕೊಡಲಿಗಳಿಂದ ಪೆಟ್ಟಿಗೆಗಳನ್ನು ಸೀಳಿ ಒಡೆದರು.

ಸೈನಿಕರು ಪೆಟ್ಟಿಗೆಗಳನ್ನು ಒಡೆಯುತ್ತಿದ್ದ ಹಾಗೇ, ಸಂತೋಜಿ ಅದನ್ನು ತನ್ನ ಬಳಿ ತರಲು ಹೇಳಿ, ಅವರು ಅದನ್ನು ತನ್ನ ಬಳಿ ತರುತ್ತಿದ್ದ ಹಾಗೇ, ಆತುರಾತುರವಾಗಿ, ಪೆಠಾರಿಯ ಮುಚ್ಚಳಗಳನ್ನು ತಾನೇ ತೆಗೆದ.

ನಾಲ್ಕು ಪೆಠಾರಿಗಳನ್ನು ತೆಗೆದುನೋಡಿದ – ಆ ನಾಲ್ಕರಲ್ಲೂ ಅವನು ನಿರೀಕ್ಷಿಸಿದ ನಿಧಿ ಇರಲಿಲ್ಲ.

ಅವರ ಅತ್ಯಾಶೆಯನ್ನು ಅಣಕಿಸುವಂತೆ ಪೆಠಾರಿಗಳು ಬರಿದಾಗಿದ್ದವು.

ಅದನ್ನು ನೋಡುತ್ತಿದ್ದ ಹಾಗೇ, ಸಂತೋಜಿಗೆ ಹುಚ್ಚು ಸಿಟ್ಟು ಬಂದು, ಅವನ ಕಣ್ಣುಗಳು ಕೆಂಪೇರಿ, ಗಿರ್ರನೆ ಸುತ್ತಲಾರಂಭಿಸಿ, ತನ್ನ ಸೈನಿಕರು ಸೆರೆ ಹಿಡಿದ ಹಮೀದುಲ್ಲಾನನ್ನು, ಕುದುರೆಯನ್ನು ಹೊಡೆಯುವ ಚಬುಕಿನಿಂದ ಹೊಡೆದು ಕೇಳಿದ —

"ಸೈತಾನ್, ಇಲ್ಲಿರಬೇಕಾಗಿದ್ದ ನಿಧಿ ಎಲ್ಲಿ ?"

ಆ ಅಮಾನುಷ ಪ್ರಹಾರದಿಂದ ನೊಂದ ಹಮೀದುಲ್ಲಾ 'ಯಾ ಖುದಾ' ಎಂದು ಆರ್ತನಾಗಿ ಚೀರಿದನೆ ಹೊರತು, ಮತ್ತೇನು ಮಾತಾಡಲಿಲ್ಲ.

ಅದನ್ನು ಕಂಡ ಸಂತೋಜಿಯ ಸಿಟ್ಟು ಮತ್ತಷ್ಟು ಏರಿ —

"ಈ ಗುಲಾಮನನ್ನು ಆ ಮರಕ್ಕೆ ಬಿಗಿಯಿರಿ, ಅದನ್ನಾಗಲಿ ಅವನ ಬಾಯ ಬಿಡಿಸುತ್ತೇನೆ."

—ಎಂದು ಅಪ್ಪಣೆ ಮಾಡಿದ.

ಅವನ ಅಪ್ಪಣೆಯಂತೆಯೇ ಗಾಯಗೊಂಡು ತತ್ತರಿಸುತ್ತಿದ್ದ ಹಮೀದುಲ್ಲಾ ಬೇಗನನ್ನು ಸೈನಿಕರು ಮರಕ್ಕೆ ಬಿಗಿದರು. ಕೈಯಲ್ಲಿ ಕಠಾರಿ ಹಿಡಿದು, ಮನುಷ್ಯಾಕಾರ ತಾಳಿದ ದೈತ್ಯನಂತೆ ಮೊರೆಯುತ್ತಾ

"ಬೊಗಳು ಗುಲಾಮ, ಆ ಹಣ ಎಲ್ಲಿದೆ?"

—ಎಂದು ಕೇಳಿದ ಸಂತೋಜಿ ಘೋರ್ಪಡೆ.

ತನ್ನೆದುರು ಕಠಾರಿಯನ್ನು ಹಿಡಿದು ನಿಂತ ಸಂತೋಜಿಯ ರುದ್ರಾಕಾರವನ್ನು ನೋಡಿಯೇ ಹಮೀದುಲ್ಲಾ ಬೇಗಸಿಗೆ ಹೃದಯ ಬಾಯಿಗೆ ಬಂದಂತಾಯಿತು. ಆದರೂ ತನ್ನ ಮನಸ್ಸನ್ನು ಬಿಗಿಹಿಡಿದು, ತನಗೇನೂ ತಿಳಿದಿಲ್ಲವೆಂಬಂತೆ ತಲೆಯಾಡಿಸಿದ.

"ಇದು ಮಂತ್ರಕ್ಕುದುರುವ ಮಾವಿನ ಕಾಯಲ್ಲ. ಆದರೂ ಇವನ ಬಾಯಿ ಬಿಡಿಸಲೇ ಬೇಕು. ತುಕೋಜಿ – ಈ ಕಠಾರಿಯನ್ನು ತೆಗೆದುಕೋ. ಒಂದೊಂದು ಬಾರಿ ಅವನು 'ಇಲ್ಲ' ಎಂದು ಹೇಳಿದಾಗ, ಒಂದೊಂದು ಬೆರಳು ಕತ್ತರಿಸು. ಇವನನ್ನು ತುಂಡುತುಂಡಾಗಿ ಕತ್ತರಿಸಿದರೂ ಸರಿಯೇ, ಅವನ ಬಾಯಿ ಬಿಡಿಸುತ್ತೇನೆ."

—ಎಂದು ಹೇಳಿ ತನ್ನ ಕೈಯಲ್ಲಿದ್ದ ಕಠಾರಿಯನ್ನು ತುಕೋಜಿಯ ಕೈಗೆ ಕೊಟ್ಟ—

"ಹೂ – ಹೇಳು! ಹಣ ಎಲ್ಲಿದೆ? ತಳಕಿನ ಪಾಳಯದಲ್ಲೇ ಇದೆಯೋ. ಅಥವಾ ಮತ್ತೆಲ್ಲಿಗಾದರೂ ಸಾಗಿಸಿದಾರೆಯೋ?"

—ಎಂದು ಕೇಳಿದ.

ಮತ್ತೊಮ್ಮೆ ಹಮೀದುಲ್ಲಾ ತಲೆಯಾಡಿಸಿದ.

ಅವನು ತಲೆಯಾಡಿಸುತ್ತಿದ್ದಂತೆಯೇ ತುಕೋಜಿ ಅವನ ಒಂದು ಬೆರಳನ್ನು ಕತ್ತರಿಸಿದ. ಕತ್ತರಿಸಿದ ಬೆರಳಿನಿಂದ ರಕ್ತ ಚಿಲ್ಲೆಂದು ಚಿಮ್ಮಿತು. 'ಅಯ್ಯೋ' ಎಂದು ಚೀರಿದ ಹಮೀದುಲ್ಲಾ.

"ಹೂ – ಹೇಳು. ಹಣ ಎಲ್ಲಿದೆ?"

ಮತ್ತೊಮ್ಮೆ ನಿರುತ್ತರ; ಮತ್ತೊಂದು ಬೆರಳು ಕಡಿದು ನೆಲಕ್ಕೆ ಬಿತ್ತು.

ಒಂದು – ಎರಡು – ಮೂರು – ನಾಲ್ಕು – ಐದು ಬೆರಳುಗಳಾದವು. ಹಮೀದುಲ್ಲಾ ಬಾಯಿಬಿಡಲಿಲ್ಲ.

"ಈ ಬಾರಿಯೂ ಅವನು ಇಲ್ಲವೆಂದರೆ, ಒಂದು ಕಣ್ಣು ಕೀಳು ತುಕೋಜಿ."

—ಎಂದು ಅಪ್ಪಣೆ ಮಾಡಿದ ಸಂತೋಜಿ.

ಅವನ ಮಾತಿನಂತೆಯೇ ತುಕೋಜಿ ರಕ್ತಸಿಕ್ತವಾದ ಕಠಾರಿಯನ್ನು

ಹಮೀದುಲ್ಲಾನ ಕಣ್ಣ ಮುಂದೆ ಝಳಪಿಸಿದ. ಅದುವರೆಗಿನ ಅನುಮಾನುಷ ಅತ್ಯಾಚಾರ, ನರಕ ಯಾತನೆಯ ಚಿತ್ರಹಿಂಸೆಯನ್ನು ಭರಿಸಿದ ಹಮೀದುಲ್ಲಾ ತನ್ನ ಕಣ್ಣ ಮುಂದಾಡುವ ಚೂರಿಯನ್ನು ನೋಡಲಾರದೆ —

"ಹೇಳುತ್ತೇನೆ....ಹೇಳುತ್ತೇನೆ....ಖುದಾನ ಆಣೆಗೂ ಹೇಳುತ್ತೇನೆ.... ನನ್ನ ಕಣ್ಣು ಕೀಳಬೇಡ...."

—ಎಂದು ಬೇಡಿದ.

"ಹಾಗೆ ದಾರಿಗೆ ಬಾ – ಹೇಳು ಹಣ ಎಲ್ಲಿದೆ?"

— ದೈತ್ಯ ತೃಪ್ತಿಯಿಂದ ಗಹಗಹಿಸಿ ನಗುತ್ತಾ ಹೇಳಿದ ಸಂತೋಜಿ.

"ಮೊದಲು ಕುಡಿಯಲು ಅಷ್ಟು ನೀರು ಕೊಡಿ ಹೇಳುತ್ತೇನೆ."

"ಊಹೂ – ಮೊದಲು ಹೇಳು; ಆಮೇಲೆ ನೀರು."

—ನಿಷ್ಠುರವಾಗಿ ಹೇಳಿದ ಸಂತೋಜಿ.

"ದಿವಾಣ – ಫೌಜುದಾರರು ಅದನ್ನು ಅಡ್ಡದಾರಿಯಲ್ಲಿ ದೊಡ್ಡೇರಿಯ ಕೋಟೆಗೆ ಸಾಗಿಸಿದಾರೆ....ನಿಮ್ಮನ್ನು ಮೋಸಗೊಳಿಸಲೆಂದೇ ನಮ್ಮನ್ನು ಈ ದಾರಿಯಲ್ಲಿ ಕಳಿಸಿದ್ದು....ನೀರು ಕೊಡಿ...."

"ತಳಕಿನ ಪಾಳೆಯವನ್ನು ಎಷ್ಟು ಹೊತ್ತಿಗೆ ಬಿಟ್ಟ – ದಿವಾಣ ಫೌಜುದಾರ?"

"ನಾವು ಅಲ್ಲಿಂದ ಹೊರಡುವ ಮೊದಲೇ."

"ಅವನೊಂದಿಗೆ ಎಷ್ಟು ಜನ ಸೈನಿಕರಿದ್ದರು?"

"ಐನೂರು ಜನ."

ಹಮೀದುಲ್ಲಾ ಬೇಗ್ ಆ ಮಾತನ್ನು ಹೇಳುತ್ತಿದ್ದ ಹಾಗೇ ಸಂತೋಜಿ ಘೋರ್ಪಡೆ, ತನ್ನವರ ಕಡೆಗೆ ತಿರುಗಿ —

"ಕೂಡಲೇ ದೊಡ್ಡೇರಿಯ ಕಡೆ ಹೊರಡಲು ಸಿದ್ಧರಾಗಿ"

—ಎಂದು ಅಪ್ಪಣೆ ಮಾಡಿ, ಇಬ್ಬರು ಸೈನಿಕರನ್ನು ಕೈ ಸನ್ನೆಯಿಂದ ತನ್ನತ್ತ ಕರೆದು —

"ಅಂಬಾಜಿ, ರಘೋಬಾ, ನೀವಿಬ್ಬರೂ ಕೂಡಲೇ ನಿಂಬಾಳ್ಕರನ ಪಾಳಯಕ್ಕೆ ಹೋಗಿ, ನಾನು ದೊಡ್ಡೇರಿಗೆ ಹೋಗಿರುವ ಸುದ್ದಿಯನ್ನು ತಿಳಿಸಿ, ಘೋರಪುರೆಯ ಸೈನ್ಯಕ್ಕೂ ದೊಡ್ಡೇರಿಯ ಕಡೆ ಬರುವಂತೆ ಸುದ್ದಿ ಕಳಿಸಬೇಕೆಂದು

ಹೇಳಿ. ಹಾಗೇ ನಿಂಬಾಳ್ಕರನ ಪಾಳಯದಿಂದ ಐನೂರು ಜನ ಈ ದಿನ ರಾತ್ರಿಯೇ ದೊಡ್ಡೇರಿಯ ಬಳಿ ನಮ್ಮನ್ನು ಕಲೆಯಬೇಕೆಂದು ಹೇಳಿ."

"ಚಲಾ ಆಗೆ'

—ಎಂದು ಕತ್ತಿಯನ್ನು ಬೀಸಿ, ಅಪ್ಪಣೆ ಮಾಡಿ ಮುಂದೆ ನುಗ್ಗಿದ.

ಬಿಲ್ಲಿನಿಂದ ಬಿಟ್ಟ ಬಾಣದಂತೆ, ಮರಾಟರ ಸೈನ್ಯ ಸಂತೋಜಿ ಘೋರ್ಪಡೆಯನ್ನು ಹಿಂಬಾಲಿಸಿದವು ಬಹು ರಭಸವಾಗಿ ಓಡುವ ಕುದುರೆಗಳ ಖುರಪುಟದ ಆಘಾತಕ್ಕೆ ಭೂಮಿ ಕಂಪಿಸಿತು.

ಎರಡು ಗಳಿಗೆಯಲ್ಲಿ, ಚಳ್ಳಕೆರೆಯ ಮಾರ್ಗದಲ್ಲಿ ಹೊರಟ ಮರಾಟರ ಸೇನೆ, ಧೂಳಿನ ಮೋಡದಲ್ಲಿ ಕಣ್ಮರೆಯಾಯಿತು.

"ನೀರು....ನೀರು...."

—ಎಂದು ಹಮೀದುಲ್ಲಾ ಚೀತ್ಕರಿಸುತ್ತಲೇ ಇದ್ದ.

ಆದರೆ ಅವನ ಕೂಗು ಯಾರ ಕಿವಿಗೂ ಬೀಳಲಿಲ್ಲ.

೭

ದುರ್ಗದ ಸೇನೆಯು ದಳಪತಿಗಳಿಂದ, ತಾವು ಚಳ್ಳಕೆರೆಯವರೆಗೆ ಬಂದಿರುವ ಸುದ್ದಿಯನ್ನು ತಳಕಿನ ಪಾಳಯಕ್ಕೆ ಮುಟ್ಟಿಸಲು ಹೊರಟ ಇಬ್ಬರು ಅಶ್ವಾರೋಹಿಗಳು, ಆ ಮಾರ್ಗದಲ್ಲಿ ಸುಮಾರು ಹರದಾರಿ ದೂರವನ್ನು ದಾಟಿರುವಾಗ, ದೂರದಿಂದ ನೆಲ ಬಿರಿಯುವಂತೆ ಕೇಳಿ ಬರುತ್ತಿದ್ದ ನೂರಾರು ಕುದುರೆಗಳ ಖುರಪುಟದ ಸದ್ದನ್ನು ಕೇಳಿ, ಗಾಳಿಯ ಜಾಡು ಹಿಡಿದು, ಸದ್ದು ತಮ್ಮತ್ತಲೇ ಬರುತ್ತಿರುವುದನ್ನು ಅರಿತು, ಆ ಪಡೆಯಾವದೆಂದು ಅರಿಯಲು, ತಟಕ್ಕನೆ ಮಾರ್ಗದ ಪಾರ್ಶ್ವದಲ್ಲಿದ್ದ ಮರಗಳ ಹಿಂದೆ ಮರೆಯಾಗಿ, ಅವಿತು ನೋಡುತ್ತಾ ನಿಂತರು.

ಆ ಪಡೆ ಕಣ್ಣು ಮರೆಯಾಗಿ, ಅದರ ಖುರಪುಟದ ಸದ್ದು ಕರಗಿ ಹೋಗುತ್ತಿದ್ದ ಹಾಗೇ, ಅವಿತು ನಿಂತ ಸೈನಿಕರಲ್ಲಿ ಒಬ್ಬ ಮರವನ್ನು ಹತ್ತಿ

ನೋಡಿ, ಆ ಮಾರ್ಗವಾಗಿ ಮತ್ತಾವ ಸೇನೆಯೂ ಬರುತ್ತಿಲ್ಲವೆಂದು ಅರಿತು ಕೊಂಡು ಮರದಿಂದ ಕೆಳಗಿಳಿದ.

ತಮ್ಮ ಸೇನೆ ಬಿಡಾರ ಮಾಡಿದ ಚಳ್ಳಕೆರೆಯ ಕಡೆ ಹೋದ ಆ ಪಡೆ ಯನ್ನು ಕಂಡು ಸೈನಿಕರಿಬ್ಬರಿಗೂ ಆಶ್ಚರ್ಯವಾದಷ್ಟೇ ಚಿಂತೆಯೂ ಆಯಿತು.

“ಈ ಕಡೆ ಯಾವ ದಂಡು ಬರುವ ಸುದ್ದಿಯೂ ಇರಲಿಲ್ಲ ಕಾಟಣ್ಣ.... ಇದು ಯಾರದೆಂದು ತಿಳಿಯಲೂ ಇಲ್ಲ. ನೀನು ಒಂದು ಕೆಲಸ ಮಾಡು. ಇಲ್ಲಿಂದಲೇ ನೀನು ಹಿಂದಕ್ಕೆ ಹೋಗಿ, ಆ ಸೇನೆ ಎತ್ತ ಹೋಗುತ್ತದೆ, ಏನು ಮಾಡುತ್ತದೆ ಎಂದು ತಿಳಿದುಕೋ. ನಾನು ಹೀಗೆ ಸೀರ್ಯದವರ ಪಾಳಯಕ್ಕೆ ಹೋಗಿ, ಅಲ್ಲಿನವರಿಗೆ ಈ ವಿಚಾರ ತಿಳಿಸುತ್ತೇನೆ. ಹಂಗೇನಾದರೂ ಲಡಾಯಿ ಆಗ್ತಾ ಇದ್ದರೆ, ತಳಕಿಗೆ ಸುದ್ದಿ ಕೊಡು.”

—ಎಂದು ಹೇಳಿದ ಒಬ್ಬ.

ಅವನಷ್ಟೇ ಚಿಂತೆಗೆ ಗುರಿಯಾದ ಕಾಟಣ್ಣ —

“ಆಯಿತು. ಹಾಗೇ ಮಾಡುತ್ತೇನೆ ಬೋರಣ್ಣ. ನೀನು ಮುಂದೆ ಹೋಗು. ಆದರೆ ಬಹಳ ಹುಷಾರಿ. ಈ ಸೈನ್ಯ ಬಂದ ರೀತಿ ನೋಡಿದರೆ, ಯಾಕೋ ಲಕ್ಷಣ ಚೆನ್ನಾಗಿದ್ದಂಗಿಲ್ಲ.”

—ಎಂದು ಹೇಳಿ ತಾನು ದುರ್ಗದ ಪಾಳಯಕ್ಕೆ ಹಿಂದಿರುಗಲು ಸಿದ್ಧನಾದ.

ತಮ್ಮತಮ್ಮಲ್ಲಿ ಹಾಗೆ ನಿರ್ಧರಿಸಿದ ಬಳಿಕ ಕಾಟಣ್ಣ, ಬಂದ ದಾರಿಯಲ್ಲೇ ವೇಗವಾಗಿ ಹಿಂದಿರುಗಿದ; ಬೋರಣ್ಣ ತಳಕಿನ ಮಾರ್ಗದಲ್ಲಿ ಮುಂದುವರಿದ.

ಎದೆಯಲ್ಲಿ ಭಾರವಾದ ಆತಂಕವನ್ನು ಹೊತ್ತು ಮುಂದೆ ಸಾಗಿದ ಬೋರಣ್ಣ, ಅಷ್ಟು ದೂರದಲ್ಲಿ ಆಕಾಶದಲ್ಲಿ ಕಿಕ್ಕಿರಿದ ಹದ್ದು, ಕಾಗೆಗಳು, ಮಾರ್ಗದ ಬದಿಯಲ್ಲಿ ಸತ್ತುಬಿದ್ದ ಕುದುರೆಗಳನ್ನು ನೋಡಿ, ಹತ್ತಿರದಲ್ಲೇ ಎಲ್ಲೋ ಯುದ್ಧವಾಗಿರಬೇಕು ಎನಿಸಿ, ಮತ್ತಷ್ಟು ಚಿಂತಾಕುಲನಾಗಿ, ಕುದುರೆ ಯನ್ನು ವೇಗವಾಗಿ ಮುಂದೆ ನಡೆಸಿದ.

ಅಲ್ಲಿಂದ ಅವನು ಅರ್ಧ ಹರದಾರಿ ದೂರ ಬರುತ್ತಿದ್ದ ಹಾಗೇ, ರಸ್ತೆ ಯಲ್ಲಿ ಬಿದ್ದ ನೂರಾರು ಸೈನಿಕರ, ಕುದುರೆಗಳ ಹೆಣವನ್ನು ಕಂಡು, ಅವನ ಚಿಂತೆ ಭಯ ಮತ್ತಷ್ಟು ಹೆಚ್ಚಿತು. ಆದರೆ, ಅಲ್ಲೇನೂ ಯುದ್ಧ ನಡೆಯು ತ್ತಿರದಿದ್ದುದನ್ನು ಕಂಡು ಧೈರ್ಯ ತಂದುಕೊಂಡು, ಮಸಣ ಮೌನ ಕವಿದ

ಸಮರಭೂಮಿಯನ್ನು ಸಮೀಪಿಸಿ, ಸತ್ತ ಜನ ಯಾರಿರಬಹುದೆಂದು ನೋಡಿದ. ಅವನು ಶವಪರೀಕ್ಷೆ ಮಾಡುತ್ತಿರುವಾಗಲೇ, ಸಮೀಪದಲ್ಲಿ 'ನೀರು....ನೀರು....' ಎಂದು ಕ್ಷೀಣಸ್ವರದಲ್ಲಿ ಯಾರೋ ಕೂಗುವ ಸದ್ದು ಕೇಳಿ ಬಂದು ಆ ಕಡೆ ತಿರುಗಿ ನೋಡಿದಾಗ, ಅವನ ಕಣ್ಣಿಗೆ ಮರಕ್ಕೆ ಬಿಗಿಯಲ್ಪಟ್ಟಿದ್ದ ಹಮೀದುಲ್ಲಾ ಕಣ್ಣಿಗೆ ಬಿದ್ದು, ಅತ್ತ ಕಡೆ ಹೋದ.

ಗತಪ್ರಾಣನಾದ ಹಮೀದುಲ್ಲಾ, ಅವನ ಕಾಲಬಳಿ ಕತ್ತರಿಸಿ ಬಿದ್ದಿದ್ದ ಬೆರಳುತುಂಡುಗಳನ್ನು ನೋಡಿ, ಯುದ್ಧ ಜೀವಿಯಾದ ಬೋರಣ್ಣಾನಿಗೂ, ತಲೆ ಸುತ್ತಿ ಬಂದು, 'ಗಾಯಗೊಂಡವನನ್ನು ಆ ಚಿತ್ರಹಿಂಸೆಗೊಳಪಡಿಸಿದವರು ಮನುಷ್ಯರಲ್ಲ, ಪಿಶಾಚಿಗಳೇ ಸರಿ.' ಎಂದುಕೊಂಡು, ತನ್ನ ಬೆನ್ನಿಗೆ ಬಿಗಿದ ಸೋರೆಬುರುಡೆಯಲ್ಲಿದ್ದ ನೀರನ್ನು. ಹಮೀದುಲ್ಲಾನಿಗೆ ಕುಡಿಯಲು ಕೊಟ್ಟು –

"ನೀನು ಯಾರು, ನಿನಗೆ ಈ ಅವಸ್ಥೆ ಏಕಾಯಿತು ?"

—ಎಂದು ಕೇಳಿದ, ಹಮೀದುಲ್ಲಾ ಬೇಗನನ್ನು ಮರದಿಂದ, ಬಿಚ್ಚಿ, ಮಲಗಿಸಿ.

"ನೀನು....ಯಾರು....ಕರುಣಾಳು ?"

"ನಾನು ದುರ್ಗದವರ ಕಡೆಯ ಸೈನಿಕ. ತಳಕಿಗೆ ಹೊರಟೇನೆ – ಸೀರ್ಯದವರನ್ನು ಕಾಣಲು."

ಬೋರಣ್ಣ ಹೇಳಿದ ಮಾತನ್ನು ಕೇಳಿ, ಹಮೀದುಲ್ಲಾ ಬೇಗನಿಗೆ ಹೋದ ಜೀವ ಬಂದಂತಾಗಿ —

"ದುರ್ಗದ ಸೇನೆ ಬಂದಿದೆಯೇ ?"

—ಎಂದು ಕೇಳಿದ.

"ಹೂ – ಬಂದಿದೆ."

"ಈಗ ಎಲ್ಲಿದೆ ?"

"ಅದಿರಲಿ – ಮೊದಲು ನೀನು ಯಾರು ಹೇಳು ?"

"ನಾನು ಸೀರ್ಯದ ದಿವಾನ್–ಫೌಜುದಾರ ಖಾಸಿಂಖಾನರ ಅಂಗರಕ್ಷಕ ಪಡೆಯ ನಾಯಕ – ಹಮೀದುಲ್ಲಾ ಬೇಗ್. ದಯವಿಟ್ಟು ದುರ್ಗದವರ ಸೇನೆ ಎಲ್ಲಿಗೆ ಬಂದಿದೆ ಹೇಳು."

"ಈಗ ಚಳ್ಳಕೆರೆಯ ಬಳಿ ಇದೆ. ನಿನಗೆ ಹೀಗೇಕಾಯಿತು ? ಇಲ್ಲಿಂದ ಆ ಕಡೆ ಹೋದ ಸೈನ್ಯ ಯಾರದು ?"

ಬೋರಣ್ಣನ ಆ ಪ್ರಶ್ನೆಗೆ ಉತ್ತರವಾಗಿ ಹಮೀದುಲ್ಲಾ ಬೇಗ್, ನಡೆದುದನ್ನೆಲ್ಲಾ ವಿವರಿಸಿ —

" ನೀನು ಆದಷ್ಟು ಬೇಗ ನಿಮ್ಮ ಪಾಳಯಕ್ಕೆ ಹಿಂದಿರುಗಿ, ನಿಮ್ಮವರಿಗೆ ಆ ಸೈತಾನ್ ಸಂತೋಜಿ, ದೊಡ್ಡೇರಿಯ ಕಡೆ ಹೊರಟಿರುವ ಸುದ್ದಿ ಕೊಡು. ಅವರಾದರೂ ಫೌಜುದಾರನನ್ನು ಈ ಸೈತಾನನ ದಾಳಿಯಿಂದ ಉಳಿಸಲಿ "

—ಎಂದು ಬೇಡಿದ.

" ಆದರೆ ಈ ಸುದ್ದಿಯನ್ನು ತಳಕಿಗೆ ಮುಟ್ಟಿಸುವುದು ಬೇಡವೇ ?"

" ಆ ಕೆಲಸವನ್ನು ಹೇಗಾದರೂ ನಾನು ಮಾಡುತ್ತೇನೆ."

" ಈ ಸ್ಥಿತಿಯಲ್ಲಿ, ಕುದುರೆಯೂ ಇಲ್ಲದೆ ನೀನು ತಳಕು ತಲುಪುವುದು ಸಾಧ್ಯವೇ ?"

" ಯುದ್ಧದಲ್ಲಿ ತಪ್ಪಿಸಿಕೊಂಡ ಕುದುರೆಗಳು ಇಲ್ಲೇ ಎಲ್ಲೋ ಅಲೆಯುತ್ತಿರಬೇಕು. ಯಾವುದಾದರೂ ಒಂದು ಸಿಗುತ್ತದೆ."

ಹಮೀದುಲ್ಲಾ ಬೇಗ್ ಹೇಳಿದುದನ್ನು ಕೇಳಿ, ಬೋರಣ್ಣನಿಗೂ ಆಯೋಚನೆ ಸರಿಯೆಂದು ತೋರಿತು.

" ಹಾಗಾದರೆ ಒಂದು ಕೆಲಸ ಮಾಡು. ನೀನು ಈ ಪರಿಸ್ಥಿತಿಯಲ್ಲಿ ಕುದುರೆಯನ್ನು ಹುಡುಕಲಾರೆ. ಹುಡಿಕಿದರೂ ಗಾಯಗೊಂಡು ರೇಗಿದ ಕುದುರೆಯನ್ನು ಹಿಡಿಯುವುದು ನಿನ್ನಿಂದ ಆಗುವುದಿಲ್ಲ. ಆದುದರಿಂದ ನೀನು ನನ್ನ ಕುದುರೆಯನ್ನು ತೆಗೆದುಕೊಂಡು ಹೋಗು. ನಾನು ಯಾವುದಾದರೂ ಕುದುರೆಯನ್ನು ಹಿಡಿದುಕೊಂಡು ನಮ್ಮ ಪಾಳಯ ಸೇರುತ್ತೇನೆ. ನಾನು ನಮ್ಮ ಪಾಳಯಕ್ಕೆ ಹೋಗುವುದು ಒಂದು ಗಳಿಗೆ ತಡವಾದರೂ ಚಿಂತೆಯಿಲ್ಲ "

—ಎಂದು ಹೇಳಿದ ಬೋರಣ್ಣ.

ಅವನು ಹೇಳಿದುದು ಕೇಳಿ ಹಮೀದುಲ್ಲಾ ಬೇಗ್, ಅದು ಚರ್ಚೆಯಲ್ಲಿ ಹೊತ್ತು ಕಳೆಯುವ ಸಮಯವಲ್ಲವಾದುದರಿಂದ ಹಾಗೇ ಮಾಡಲು ಒಪ್ಪಿಕೊಂಡ.

ಬೋರಣ್ಣ ಗಾಯಗೊಂಡ ಹಮೀದುಲ್ಲಾ ಬೇಗನನ್ನು ತನ್ನ ಕುದುರೆಯ ಮೇಲೆ ಕೂಡಿಸಿ, ಲಗಾಮುಗಳನ್ನು ಅವನ ಕೈಗಳಿಗೆ ಬಿಗಿದು, ಕುದುರೆಯ ಬೆನ್ನು ತಟ್ಟಿ —

" ರಾಗೂ, ದಾರಿಯಲ್ಲೆಲ್ಲೂ ತಂಟೆ ಮಾಡಬೇಡ "

—ಎಂದು ಹೇಳಿದ.

ಅವನ ಮಾತನ್ನು ಅರ್ಥ ಮಾಡಿಕೊಂಡಂತೆ ಕುದುರೆ ಕತ್ತು ಕೊಡಹಿ, ತಳಕಿನ ಮಾರ್ಗವಾಗಿ ಹೊರಟಿತು.

೮

ಚಳ್ಳಕೆರೆಯ ಮಾರ್ಗವಾಗಿ, ದೊಡ್ಡೇರಿಯ ಕಡೆ ದೌಡಾಯಿಸಿದ ಸಂತೋಜಿ ಘೋರ್ಪಡೆಗೆ ಚಳ್ಳಕೆರೆಯ ಬಳಿ, ಚಿತ್ರದುರ್ಗದ ಸೇನೆ ಬೀಡು ಬಿಟ್ಟಿರುವ ವಿಷಯ ತಿಳಿದಿರಲಿಲ್ಲ.

ದುರ್ಗದ ಸೇನೆ ರಾಜಮಾರ್ಗಕ್ಕೆ ದೂರವಾಗಿ, ದಟ್ಟವಾಗಿ ಬೆಳೆದ ಈಚಲುವನದ ಮರೆಯಲ್ಲಿ, ಕರಿಕಲ್ಲು ಗುಡ್ಡದ ಮರೆಯಲ್ಲಿ ಬೀಡು ಬಿಟ್ಟಿದ್ದ ರಿಂದ, ಆ ಮಾರ್ಗವಾಗಿಯೇ ಹೋದರೂ ಸಂತೋಜಿಗೆ ಆ ವಿಷಯ ತಿಳಿಯ ಲಿಲ್ಲ. ನಿಂತು ಪರೀಕ್ಷಿಸುವ ವ್ಯವಧಾನವಾಗಲಿ, ಅದರ ಅಗತ್ಯವಾಗಲೀ ಇಲ್ಲದ ಸಂತೋಜಿ, ದುರ್ಗದ ಪಾಳಯದ ಅನತಿ ದೂರದಲ್ಲಿಯೇ ಮಿಂಚಿನ ವೇಗದಲ್ಲಿ ಹಾಯ್ದು ಹೋದ.

ಆದರೆ ತಮಗೆ ಅತಿ ಸಮೀಪವಾಗಿ, ಅಶ್ವಾರೋಹಿಗಳ ಪಡೆಯೊಂದು ಬಹುವೇಗವಾಗಿ ಹಾದು ಹೋದ ವಿಷಯ, ಬಹು ದೂರದವರೆಗೂ ಕೇಳಿಸು ತ್ತಿದ್ದ ನೂರಾರು ಕುದುರೆಗಳ ಖುರಪುಟದ ಸದ್ದಿನಿಂದಲೇ ತಿಳಿದ ದುರ್ಗದ ಸೇನೆಯಲ್ಲಿ ಗಡಿಬಿಡಿಯುಂಟಾಯಿತು.

"ಇದು ಯಾರ ಸೇನೆ, ಎತ್ತ ಹೋಯಿತು ?"

—ಎಂದು ಚಿಂತಿಸುತ್ತಿರುವಾಗಲೇ, ಆ ಸೇನೆಯ ಬೆನ್ನ ಹಿಂದೆಯೇ ಬಂದ ಕಾಟಣ್ಣ, ತಾವು ತಳಕಿನ ಮಾರ್ಗವಾಗಿ ಹೋಗುವಾಗ ಕಂಡ ಅಶ್ವಾ ರೋಹಿಗಳ ಪಡೆಯನ್ನೂ ಆ ಕಾರಣದಿಂದ ತಾನು ಹಿಂದಿರುಗಿ ಬಂದುದನ್ನೂ ಹೇಳಿದ.

ಅನಿರೀಕ್ಷಿತವಾಗಿ, ಅಪರಿಚಿತ ಅಶ್ವಾರೋಹಿಗಳ ಪಡೆಯೊಂದು ತಮ್ಮ ಸಮೀಪದಲ್ಲಿಯೇ ಹೋದುದನ್ನು ಕೇಳಿದ ಬೊಮ್ಮಣ್ಣ, ವೆಂಕಣ್ಣ, 'ಆ ಸೇನೆ

ಯಾರದಾದರೂ ನಾವು ಎಚ್ಚರವಾಗಿರಬೇಕಾದುದಗತ್ಯ' ಎಂಬುದನ್ನರಿತು, ವಿಶ್ರಮಿಸಿಕೊಳ್ಳುತ್ತಿದ್ದ ಸೇನೆಗೆ ಕೂಡಲೇ ಸಮರ ಸಿದ್ಧವಾಗಬೇಕೆಂದು ಅಪ್ಪಣೆ ಮಾಡಿದರು.

ಯುದ್ಧಸಿದ್ಧತೆಯ ತುತೂರಿಗಳು ಮೊಳಗುತ್ತಿದ್ದ ಹಾಗೇ, ವಿಶ್ರಮಿಸಿಕೊಳ್ಳುತ್ತಿದ್ದ ದುರ್ಗದ ಸೇನೆ, ಗಡಿಬಿಡಿಯಲ್ಲಿ ಮೇಲೆದ್ದು, ಸಮರಸನ್ನದ್ಧವಾಯಿತು.

ದಳಪತಿಗಳೂ, ಕವಚ, ಶಸ್ತ್ರಾಸ್ತ್ರಗಳನ್ನು ಧರಿಸಿ ಸಿದ್ಧರಾದರು.

ಹೀಗೆ ಸೇನೆ ಸಿದ್ಧವಾಗುತ್ತಿರುವಾಗಲೇ, ಬೋರಣ್ಣ ಹಿಂದಿರುಗಿ, ತನ್ನ ಮಾರ್ಗಮಧ್ಯದಲ್ಲಿ ಹಮೀದುಲ್ಲಾ ಬೇಗನಿಂದ ತನಗೆ ತಿಳಿದ ಸುದ್ದಿಯೆಲ್ಲವನ್ನೂ ಹೇಳಿದ.

ತಮ್ಮ ಸಮೀಪದಲ್ಲಿ ಹೋದುದು ಸಂತೋಜಿ ಘೋರ್ಪಡೆಯ ಸೇನೆ, ಅವನು ಕೋಟೆಯಲ್ಲಿ ಅವಿತಿರುವ ಖಾಸಿಂಖಾನನನ್ನು ಆಕ್ರಮಿಸಲು ಹೋಗುತ್ತಿದ್ದಾನೆ ಎಂಬುದನ್ನು ಕೇಳುತ್ತಿದ್ದ ಹಾಗೇ, ಬೊಮ್ಮಣ್ಣ, ವೆಂಕಣ್ಣ, ಜಾರ್ಜ್ ಡ್ಯುಪೋರೋ – ಈ ಮೂವರೂ ಕಲೆತು ಮುಂದೇನು ಮಾಡಬೇಕೆಂದು ಯೋಚಿಸಿದರು.

ಸಂತೋಜಿಯ ಬಲ ಕೇವಲ ನಾಲ್ಕು ನೂರು, ಐದು ನೂರು ಜನ ಸೈನಿಕರು ಮಾತ್ರ ಎಂಬುದನ್ನರಿತ ಜಾರ್ಜ್ ಡ್ಯುಪೋರೋ, ತಾವು ಕೂಡಲೇ ಅವನನ್ನು ಹಿಂಬಾಲಿಸಿ, ಅವನ ಮೇಲೆ ದಾಳಿ ಮಾಡಬೇಕು ಎಂದು ಸಲಹೆ ಮಾಡಿದ.

ಬೊಮ್ಮಣ್ಣನಿಗೆ ಆ ಸಲಹೆ ಅಷ್ಟಾಗಿ ಯುಕ್ತವಾದುದೆಂದು ತೋರಲಿಲ್ಲ. ಸಂತೋಜಿ ಘೋರ್ಪಡೆಯ ಬಳಿ ಸುಮಾರು ಇಪ್ಪತ್ತು ಸಾವಿರ ಕುದುರೆಗಳ ಪ್ರಬಲ ಸೇನೆಯಿದೆಯೆಂದು ಕೇಳಿದ ಆತ, 'ನಾವು ನಮ್ಮ ಸೇನೆಯನ್ನು ದೊಡ್ಡೇರಿಯ ಕಡೆ ನಡೆಸಿದರೆ, ನಮ್ಮ ಬೆನ್ನ ಹಿಂದೇ ನಿಂಬಾಳ್ಕರನ ಸೇನೆ ಬಂದು ಬಿದ್ದರೆ, ನಮ್ಮ ಗತಿ, ಅಡಕತ್ತರಿಯಲ್ಲಿ ಸಿಕ್ಕಂತಾಗುವುದಲ್ಲಾ' ಎಂದು ಯೋಚಿಸಿದ.

ಆದರೆ ಜಾರ್ಜ್ ಆ ವಾದವನ್ನು ಒಪ್ಪಲು ಸಿದ್ಧನಾಗಿರಲಿಲ್ಲ.

"ನಿಮಗೆ ಆ ಭಯವಿದ್ದರೆ ಒಂದು ಕೆಲಸ ಮಾಡಿ. ನನ್ನೊಂದಿಗೆ ಕೇವಲ ಒಂದು ಸಾವಿರ ಮಂದಿ ಅಶ್ವಾರೋಹಿಗಳ ಸೇನೆಯನ್ನು ಕಳುಹಿಸಿ.

ಉಳಿದದ್ದು ಇಲ್ಲಿರಲಿ – ನಿಮ್ಮ ವಶದಲ್ಲಿ. ನಾನು ಸಂತೋಜಿಯ ಯೋಗ ಕ್ಷೇಮ ವಿಚಾರಿಸಿಕೊಳ್ಳುತ್ತೇನೆ. ನನಗೆ ಸೋಲಾಗಿ, ಹಿಂದಿರುಗಿ ಬರ ಬೇಕಾದರೆ, ನನ್ನ ಬೆಂಬಲಕ್ಕೆ ನೀವಿರಿ."

—ಎಂದು ಹೇಳಿದ.

ಆ ಮಾತಿಗೂ ಬೊಮ್ಮಣ್ಣ ಹಿಂದೆ ಮುಂದೆ ನೋಡಿದಾಗ —

"ನಿಮಗೆ ಹೀಗೆ ಮಾಡಿರೆಂದು ಒತ್ತಾಯ ಮಾಡಲು ನನಗೆ ಅಧಿಕಾರ ವಿಲ್ಲ. ನನಗೆ ಹೋಗಲು ಅನುಮತಿ ಕೊಡಿ."

—ಎಂದು ಏಕಾಂಗಿಯಾಗಿ, ಸಂತೋಜಿಯ ಬೆನ್ನ ಹಿಂದೆ ಹೋಗಲು ಜಾನ್ ನಿರ್ಧರಿಸಿದಾಗ, ಆತನ ರಕ್ಷಣೆಯ ಹೊಣೆ ಹೊತ್ತ ಬೊಮ್ಮಣ್ಣ, ಆತ ನೊಂದಿಗೆ ಸೇನೆಯನ್ನು ಕಳುಹಿಸಲು ಒಪ್ಪಲೇ ಬೇಕಾಯಿತು.

ಆ ನಿರ್ಧಾರವನ್ನು ಕೈಕೊಂಡ ಬಳಿಕ ಬೊಮ್ಮಣ್ಣ, ತಾನೂ ಜಾನ ನೊಂದಿಗೆ, ಸಾವಿರದ್ವೈನೂರು ಮಂದಿ ಸೈನಿಕರ ಬಲದೊಂದಿಗೆ ಹೋಗಲು ನಿರ್ಧರಿಸಿ, ಉಳಿದ ಸೇನೆಯ ಯಾಜಮಾನ್ಯವನ್ನು ಕುಡುತನಿಯ ವೆಂಕಣ್ಣ ನಿಗೆ ವಹಿಸಿಕೊಟ್ಟು, ಜಾನನ ಸಲಹೆಯಂತೆ, ಇರುಳಕಾಳಗಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡು, ಸೇನೆಯೊಂದಿಗೆ, ಸಂತೋಜಿ ಘೋರ್ಪಡೆಯ ಬೆನ್ನಟ್ಟಿ ಹೊರಟ.

* * * *

ತಳಕಿನಿಂದ, ಅಡ್ಡಮಾರ್ಗದಲ್ಲಿ ಬೊಕ್ಕಸದ ಹಣವನ್ನು ಸಾಗಿಸಿಕೊಂಡು ಹೊರಟ ಖಾಸಿಂಖಾನ್, ಆದಷ್ಟು ಬೇಗ ದೊಡ್ಡೇರಿಯ ಕೋಟೆಯನ್ನು ಸೇರಿ, ಕೋಟೆಯ ಬಾಗಿಲು ಹಾಕಿಸಬೇಕೆನ್ನುತ್ತಿರುವಾಗಲೇ, ಮಿಂಚಿನ ವೇಗದಲ್ಲಿ ಬುಡ್ತನ ಹಟ್ಟಿಯ ಕಡೆಯಿಂದ ಬಂದ ಸಂತೋಜಿಯ ಸೇನೆ, ಚಳ್ಳಕೆರೆಯಿಂದ ದೊಡ್ಡೇರಿಗಿದ್ದ ಕೇವಲ ಒಂದು ಹರದಾರಿಯ ದೂರವನ್ನು ಬಿರುಗಾಳಿಯ ವೇಗ ದಿಂದ ಸವೆಸಿ, ಖಾಸಿಂಖಾನನ ಸೇನೆಯೊಂದಿಗೇ, ದೊಡ್ಡೇರಿಯ ಕೋಟೆ ಯನ್ನು ಪ್ರವೇಶಿಸಿ, ಸೀರ್ಯದ ಸೇನೆಯ ಮೇಲೆ, ಕುರಿಯ ಹಿಂಡಿನ ಮೇಲೆ ಬೀಳುವ ತೋಳದಂತೆ ಬಿತ್ತು.

ಕನಸುಮನಸಿನಲ್ಲಿಯೂ, ದೊಡ್ಡೇರಿಯ ಕೋಟೆಯ ಬಳಿ ಸಂತೋಜಿ ಘೋರ್ಪಡೆಯನ್ನು ನಿರೀಕ್ಷಿಸದಿದ್ದ ಖಾಸಿಂಖಾನ್ ದಿಗ್ಭ್ರಾಂತನಾದರೂ, ಆ

ಹೊತ್ತಿನಲ್ಲಿ ಹೆದರಿದರೆ, ತನ್ನ ಕಾರ್ಯ ವಿಫಲವಾಗುವುದೆಂದು, ತನ್ನ ಮನಸ್ಸಿನ ಮೇಲಾದ ಆಘಾತದಿಂದ ಸಾವರಿಸಿಕೊಂಡು, ತನ್ನ ಪಡೆಗಳಿಗೆ, ಮರಾಟರನ್ನು ಎದುರಿಸಲು ಅಪ್ಪಣೆ ಮಾಡಿದ.

ತನ್ನ ಅನಿರೀಕ್ಷಿತ ದಾಳಿಯಿಂದ, ಸೀರ್ಯದವರ ಸೇನೆಯಲ್ಲಿ ಸಾಕಷ್ಟು ಅನಾಹುತವನ್ನುಂಟುಮಾಡಿದ ಸಂತೋಜಿ ಘೋರ್ಪಡೆ, ಸಂಖ್ಯೆಯಲ್ಲಿ ಸೀರ್ಯದವರ ಬಲ ತನ್ನದಕ್ಕಿಂತಲೂ ಇಮ್ಮಡಿಯಾಗಿದ್ದುದನ್ನು ಕಂಡು, ಆಗಲೇ ಯುದ್ಧವನ್ನು ಮುಂದುವರಿಸಿದರೆ, ತನ್ನ ಸೇನೆಗೆ ಸೋಲು ಕೈಗಟ್ಟುವುದೆಂಬುದನ್ನರಿತುಕೊಂಡು, ಆ ರಾತ್ರಿ ನಿಂಬಾಳ್ಕರನ ಸೇನೆ ತನ್ನ ನೆರವಿಗೆ ಬರುವ ನಿರೀಕ್ಷೆಯಿದ್ದುದರಿಂದ, ತಾತ್ಕಾಲಿಕವಾಗಿ ಹಿಂಜರಿಯುವ ಯೋಚನೆ ಮಾಡಿ, ತನ್ನವರಿಗೆ ಆ ಸೂಚನೆಯನ್ನು ಕೊಟ್ಟ.

ಅದರಂತೆಯೇ ಮರಾಟರ ಸೇನೆ ಹೋರಾಡುತ್ತಲೇ ಹಿಂದೆ ಸರಿಯಲಾರಂಭಿಸಿತು.

ಸಂತೋಜಿ ಘೋರ್ಪಡೆಯ ಸೇನೆಗಳು ಹಿಂದೆ ಸರಿಯುತ್ತಿರುವುದನ್ನು ಕಂಡ ಖಾಸಿಂಖಾನ್, ಅವನ ಬಲ ತನ್ನದಕ್ಕಿಂತಲೂ ಕಡಮೆಯೆಂಬುದನ್ನರಿತು, ಅವರು ಹಿಂಜರಿಯುತ್ತಿರುವ ಸಮಯದಲ್ಲೇ, ಅವರ ಮೇಲೆ ಬಿದ್ದು ಅವರನ್ನು ಮುಗಿಸಿಬಿಡಬೇಕು ಎಂದು ಯೋಚನೆ ಮಾಡಿ, ತನ್ನ ಸೇನೆಗೆ ಮರಾಟರ ಮೇಲೆ ಬೀಳುವಂತೆ ಅಪ್ಪಣೆ ಮಾಡಿ, ಗೆಲುವಿನ ಉತ್ಸಾಹದಲ್ಲಿ ತಾನೇ, ಅವರ ಮೇಲೆ ಬೀಳಲು ಮುಂದಾದ.

ಸಂತೋಜಿಗೂ ಖಾಸಿಂಖಾನನ ಯೋಚನೆ ಏನೆಂಬುದು ಅರ್ಥವಾಯಿತು.

ತನ್ನ ಬಲ ಕಡಮೆಯಾದ ಆ ಹೊತ್ತಿನಲ್ಲಿ ತಾನು ಎದೆಗೆಟ್ಟರೆ, ಸಂಪೂರ್ಣ ವಿನಾಶವೇ ಕೈಗಟ್ಟುವುದೆಂಬುದನ್ನು ಅರ್ಥ ಮಾಡಿಕೊಂಡ ಸಂತೋಜಿ, ವಿಪತ್ಸಮಯದಲ್ಲಿ, ಶತ್ರುಸೇನೆಯನ್ನು ಅನಾಯಕವನ್ನಾಗಿ ಮಾಡುವುದೇ, ಅವರಲ್ಲಿ ಭೀತಿಯನ್ನು ಬಿತ್ತಲು ಉತ್ತಮ ಮಾರ್ಗವೆಂದು ಲೆಕ್ಕ ಹಾಕಿ, ತನ್ನ ಹಿಂಜರಿಯುವ ಯುದ್ಧ ವಿಧಾನವನ್ನು ಬದಲಾಯಿಸಿ, ಹಿಂದೆ ಸರಿದಂತೆ ನಟಿಸುತ್ತಾ, ತಟಕ್ಕನೆ ಮೇಲೆ ಬಿದ್ದು ದಾಳಿ ಮಾಡುತ್ತಾ, ದೊಡ್ಡೇರಿಯ ಬೀದಿ ಬೀದಿ, ಮನೆ ಮನೆಯನ್ನು ತನ್ನ ಯುದ್ಧ ಕ್ರಮಕ್ಕೆ ಸಾಧನವಾಗಿ ಬಳಸುತ್ತಾ ಖಾಸಿಂಖಾನನ ಮೇಲೆ ತನ್ನ ದೃಷ್ಟಿಯನ್ನು ಕೇಂದ್ರೀಕರಿಸಿದ್ದ.

ಗುಡ್ಡ ಬೆಟ್ಟಗಳಲ್ಲಿ ಹೋರಾಟವಾಡಿದ ಅಭ್ಯಾಸವಿದ್ದ ಮರಾಟರ ಬಲಕ್ಕೆ, ಮನೆ ಮುಂಗಟ್ಟುಗಳಿಂದ ಕಿಕ್ಕಿರಿದ ದೊಡ್ಡೇರಿಯ ಬೀದಿಗಳಲ್ಲಿ ಯುದ್ಧ ಮಾಡುವುದು ಅಷ್ಟೇನೂ ಕಷ್ಟವೆಂದು ತೋರದಿದ್ದರೂ, ಬಯಲು ಯುದ್ಧದಲ್ಲೇ ನಿಷ್ಣಾತರಾದ ಮುಸಲ್ಮಾನರ ಸೇನೆಗೆ, ನಗರದ ಬೀದಿ ಬೀದಿಗಳಲ್ಲಿ ಮಾಡಬೇಕಾದ ಈ ಯುದ್ಧ ರೀತಿ ಅತ್ಯಂತ ವಿಚಿತ್ರವಾಗಿತ್ತು.

ಹೀಗೆ ತನಗೊದಗಿದ ಅನನುಕೂಲ ಪರಿಸ್ಥಿತಿಯನ್ನೇ, ತನ್ನ ಪ್ರಬಲ ರಕ್ಷಣಾ ಸಾಧನವನ್ನಾಗಿ ಪರಿವರ್ತಿಸಿಕೊಂಡು ಅತ್ಯಂತ ಚತುರತೆಯಿಂದ ಯುದ್ಧ ಮಾಡುತ್ತಿದ್ದ ಸಂತೋಜಿ, ತನ್ನ ದೃಷ್ಟಿಯನ್ನೆಲ್ಲಾ ಖಾಸಿಂಖಾನನ ಮೇಲೇ ಇರಿಸಿದ್ದ.

ಅವನ ಗಮನ ಅತ್ತಕಡೆಗಿದ್ದಾಗ, 'ಗನಿಮಿಕಾವಾ' ಯುದ್ಧ ರೀತಿಯಲ್ಲಿ ನಿಷ್ಣಾತರಾದ ಮರಾಟಾ ಸೈನಿಕರು, ಸೋತರೆ ತಾವೊಬ್ಬರೂ ಉಳಿಯುವುದಿಲ್ಲವೆಂಬುದನ್ನರಿತುಕೊಂಡು, ಆದಷ್ಟುಮಟ್ಟಿಗೆ ತಮ್ಮ ಜೀವರಕ್ಷಣೆ ಮಾಡಿಕೊಂಡು, ಮುಸಲ್ಮಾನರ ಪಡೆಯನ್ನು ಸವೆಸುತ್ತಿದ್ದರು.

ಈ ಬಗೆಯ ಯುದ್ಧದಿಂದಾಗಿ, ದೊಡ್ಡೇರಿಯ ಬೀದಿ ಬೀದಿ, ಓಣಿ ಓಣಿಯೂ, ಹೆಣಗಳಿಂದ ಕಿಕ್ಕಿರಿದು, ರಕ್ತಮಯವಾಯಿತು. ಸೈನಿಕರೇ ಅಲ್ಲದೆ ನೂರಾರು ಮಂದಿ ನಾಗರಿಕರೂ ಸತ್ತರು. ಉನ್ಮತ್ತವಾಗಿ ಅಲೆಯುವ ಕುದುರೆಗಳ ತುಳಿತಕ್ಕೆ ಸಿಲುಕಿ ಎಷ್ಟೋ ಮಂದಿ ಹೆಂಗಸರು, ಮಕ್ಕಳು ಸತ್ತರು. ಅನಿವಾರ್ಯವಾಗಿ, ತಮ್ಮ ಪ್ರಾಣರಕ್ಷಣೆಗಾಗಿ, ಯುದ್ಧದ ಮುಖವನ್ನೇ ಕಾಣದ ನಾಗರಿಕರೂ, ಕೊಡಲಿ, ಮಚ್ಚುಗಳನ್ನು ಹಿಡಿದು, ತಮ್ಮವರು ಯಾರು, ಶತ್ರುಗಳು ಯಾರು ಎಂದು ತಿಳಿಯಲಾರದೆ, ಕೈಗೆ ಸಿಕ್ಕವರನ್ನು ಕೊಚ್ಚಲಾರಂಭಿಸಿದರು.

ಈ ಎಲ್ಲ ಗದ್ದಲದಲ್ಲಿಯೂ ಖಾಸಿಂಖಾನ್ ತನ್ನ ಅಳವಿನೊಳಗೆ ಸಿಕ್ಕುವುದನ್ನೇ ಕಾಯುತ್ತಿದ್ದ ಸಂತೋಜಿ ಘೋರ್ಪಡೆ, ಬಹು ಚತುರತೆಯಿಂದ ಖಾಸಿಂಖಾನನನ್ನು ಅವನ ರಕ್ಷಕರಿಂದ ಬೇರ್ಪಡಿಸಿ, ಅವನು ಒಂಟಿಯಾದ ಕ್ಷಣವನ್ನೇ ಸಾಧಿಸಿ, ಮಿಂಚಿನ ವೇಗದಿಂದ ಅವನ ಮೇಲೆ ತನ್ನ ಕುದುರೆಯನ್ನು ನುಗ್ಗಿಸಿ, ಹಿರಿದ ಕತ್ತಿಯನ್ನು ಖಾಸಿಂಖಾನನ ಎದೆಯೊಳಗೆ ಹುಗಿಸಿದ. 'ಯಾ ಅಲ್ಲಾ', ಎಂದು ಚೀರಿದ ಖಾಸಿಂಖಾನ್. ಖಾಸಿಂಖಾನ್ ಕೆಳಗುರುಳುತ್ತಿದ್ದ ಹಾಗೇ ಸಂತೋಜಿ, ಅವನ ಕತ್ತನ್ನು ಕತ್ತರಿಸಿ, ತನ್ನ ಕತ್ತಿಯ

ತುದಿಗೆ ಸಿಕ್ಕಿಸಿ, ಅದು ಎಲ್ಲರಿಗೂ ಕಾಣುವಂತೆ ಮೇಲಕ್ಕೆ ಎತ್ತಿ ಹಿಡಿದು, 'ಹರ ಹರ ಮಹಾದೇವ್' ಎಂದು ಜಯಘೋಷ ಮಾಡಿದ.

ತಮ್ಮ ನಾಯಕನೇ ಮೃತನಾದುದನ್ನು ಕಂಡ ಮುಸಲ್ಮಾನರ ಪಡೆ, ಎದೆಗುಂದಿ ಪಲಾಯನ ಮಾಡತೊಡಗಿತು.

ಶತ್ರುಸೇನೆ ಹಿಮ್ಮೆಟ್ಟತೊಡಗಿದುದನ್ನು ಕಂಡ ಸಂತೋಜಿ ಘೋರ್ಪಡೆ ತನಗೆ ದೊರೆತ ಆ ವಿಜಯದಿಂದ ಉನ್ಮತ್ತನಾಗಿ, ತನ್ನ ಸೇನೆಗೆ ಕಂಡ ಕಂಡವರನ್ನು ಕೊಲ್ಲಲು, ಮನೆಗಳನ್ನು ಲೂಟಿ ಮಾಡಲು, ಹೆದರಿದವರನ್ನು ಮತ್ತಷ್ಟು ಹೆದರಿಸುವ ಸಲುವಾಗಿ, ಆದಷ್ಟು ಮನೆಗಳಿಗೆ ಬೆಂಕಿ ಹತ್ತಿಸಲು ಅಪ್ಪಣೆ ಮಾಡಿದ.

ಸಮರದಲ್ಲಿ ಹೇಗೋ, ಲೂಟಿಯಲ್ಲೂ ಅಷ್ಟೇ ನಿಷ್ಣಾತವಾದ ಮರಾಟರ ಸೇನೆ, ಮೃತ್ಯುಸೇನೆಯಂತೆ ದೊಡ್ಡೇರಿಯ ಬೀದಿಗಳಲ್ಲಿ ಅಲೆಯತೊಡಗಿತು. ಅನತಿಕಾಲದಲ್ಲಿಯೇ ಹತ್ತಾರು ಮನೆಗಳು ಉರಿಯಲು ಆರಂಭಿಸಿ, ಬಲಿಯುತ್ತಿದ್ದ ಸಂಜೆಗತ್ತಲಿನಲ್ಲಿ, ಉರಿಬೆಳಕು ಮುಗಿಲನ್ನು ಹಬ್ಬಿ, ಅಲ್ಲೂ ರಕ್ತಛಾಯೆಯನ್ನು ಹಬ್ಬಿಸಿದವು.

ಮರಾಟರ ಸೇನೆ, ಈ ಕೊಲೆ, ಸುಲಿಗೆ, ಅಗ್ನಿಕಾಂಡದಲ್ಲಿ ನಿರತವಾಗಿರುವಾಗಲೇ, ದುರ್ಗದ ಸೇನೆ ಅಯಾಚಿತವಾಗಿ ತೆರೆದ ಕೋಟೆಯ ಬಾಗಿಲಿನ ಮೂಲಕ ದೊಡ್ಡೇರಿಯನ್ನು ಪ್ರವೇಶಿಸಿತು.

ಶಿರ್ಜಾದವರ ಪಡೆಯೊಂದಿಗೆ ನಡೆದ ಹೋರಾಟದಲ್ಲಿ ಗೆಲವು ಪಡೆದರೂ, ಸಾಕಷ್ಟು ದುರ್ಬಲವಾದ ಮರಾಟರ ಸೇನೆ ಇದ್ದಕ್ಕಿದ್ದ ಹಾಗೆ ತಮ್ಮ ಮೇಲೆ ಏರಿ ಬಂದ ಈ ಹೊಸಪಡೆಯನ್ನು ಕಂಡು ಎದೆಗೆಟ್ಟಿತು.

ಈ ಹೊಸ ಸೇನೆಯನ್ನು ನೇರವಾಗಿ ಎದುರಿಸುವುದು ಯುಕ್ತವಲ್ಲವೆಂದು ಅರ್ಥಮಾಡಿಕೊಂಡ, ಈ ಸೇನೆ ಯಾರದು, ಎಲ್ಲಿಯದು, ಅದರ ಬಲಾಬಲವೇನು ಎಂಬುದನ್ನರಿಯದ ಸಂತೋಜಿ ಘೋರ್ಪಡೆ, ನಿಂಬಾಳ್ಕರ್ ಇಲ್ಲವೇ ಘೆರಪುರಿಯ ಸೇನೆ ತನ್ನ ನೆರವಿಗೆ ಬರುವವರೆಗೂ ಹೇಗಾದರೂ ಪ್ರಯತ್ನ ಪಟ್ಟು ಕಾಲಹರಣ ಮಾಡುವ ಉದ್ದೇಶದಿಂದ, ಅವಸರವಾಗಿ ದೊಡ್ಡೇರಿಯಲ್ಲಿದ್ದ ಕಿಲ್ಲೇದಾರನ ಅರಮನೆಯನ್ನು ಸೇರಿಕೊಂಡು, ಅರಮನೆ ಶತ್ರುವಶವಾಗದಂತೆ ಕಾಯಬೇಕೆಂದು ತನ್ನವರಿಗೆ ಆಜ್ಞಾಪಿಸಿದ.

ಅವನು ಹೀಗೆ, ತನ್ನವರೆಲ್ಲರನ್ನೂ ಒಂದು ಕಡೆಗೆ ಗುಂಪು ಕಲೆಸಿದುದೇ ಅವನಿಗೆ ಮುಳುವಾಯಿತು.

ಮರಾಟರು ಹಾಗೆ ಒಂದು ಕಡೆ ಗುಂಪು ಕೂಡಿದುದನ್ನು ಕಂಡ ಕೂಡಲೇ, ದುರ್ಗದ ಸೇನೆ ಅವರನ್ನು ಸುತ್ತುವರಿಯಿತು. ಮರಾಟರು ಮುಚ್ಚಿಸಿದ ಅರಮನೆಯ ಹೆಬ್ಬಾಗಿಲಿಗೆ ಉರಿ ಹೊತ್ತಿಸಿ, ದುರ್ಗದ ಸೇನೆ ಆ ಬಾಗಿಲು ಮುರಿದು ಬೀಳುವುದನ್ನೇ ಕಾಯತೊಡಗಿತು ನೂರಾರು ಜನ ಕೊಡಲಿಗಳಿಂದ ಆ ಬಾಗಿಲನ್ನು ಕತ್ತರಿಸಿ, ಉರಿಯ ಕೆಲಸಕ್ಕೆ ನೆರವಾದರು.

ಒಮ್ಮೆ ಹೆಬ್ಬಾಗಿಲು ಮುರಿದು ಬಿದ್ದ ಬಳಿಕ, ತೂಬು ತೆಗೆದ ನೀರಿನಂತೆ ದುರ್ಗದ ಸೇನೆ ಅರಮನೆಯನ್ನು ಪ್ರವೇಶಿಸಿತು.

ಈ ದಾಳಿಯನ್ನು ತಪ್ಪಿಸಿಕೊಳ್ಳಲು, ಕಿಟಕಿ, ಗವಾಕ್ಷಿಗಳಿಂದ ಓಡಲೆತ್ನಿಸಿದ ಮರಾಟರು, ಅರಮನೆಯನ್ನು ಸುತ್ತುವರಿದ ಸೇನೆಗೆ ಬಲಿಯಾದರು.

ಒಳಗಿದ್ದವರು, ಒಳನುಗ್ಗಿದ ಸೇನೆಯ ಖಡ್ಗಗಳಿಗೆ, ಹೋರಾಡುತ್ತಾ ಬಲಿಯಾದರು.

ಉಳಿದವರು ಈ ಸಾಮಾನ್ಯ ಮಾರಣ ಹೋಮದಲ್ಲಿ ನಿರತರಾಗಿದ್ದಾಗ, ಜಾರ್ಜ್ ಡ್ಯುಪ್ರೊರೋ ತನ್ನ ವೈರಿಯಾದ ಸಂತೋಜಿ ಘೋರ್ಪಡೆಯನ್ನೇ ಹುಡುಕಿಕೊಂಡು, ಅರಮನೆಯಲ್ಲಿ ಕೋಣೆಯಿಂದ ಕೋಣೆಗೆ ಅಲೆಯುತ್ತಿದ್ದ.

ಶತ್ರುಸೇನೆಯಿಂದ ತಪ್ಪಿಸಿಕೊಳ್ಳಲು ದಾರಿಯನ್ನು ಹುಡುಕುತ್ತಾ, ಸಿಕ್ಕದಾರಿಯಲ್ಲಿ ನುಸುಳಿಕೊಂಡು ಹೋಗುತ್ತಿದ್ದ ಸಂತೋಜಿ ಘೋರ್ಪಡೆ ಕೊನೆಗೆ ಜಾನನ ಕೈಗೆ ಸಿಕ್ಕಲೇ ಬೇಕಾಯಿತು.

ತನ್ನೊಂದಿಗೆ ಬಂದ ಸೈನಿಕರು ಹಿಡಿದ ಪಂಜುಗಳ ಉರಿಬೆಳಕಿನಲ್ಲಿ, ಜಾನನಿಗೆ, ಉರಿಗಣ್ಣುಗಳಿಂದ ಹಿರಿದ ಕೃಪಾಣವನ್ನು ಹಿಡಿದು, ಅನಿವಾರ್ಯವಾಗಿ ಎದುರಿಸಲೇ ಬೇಕಾಗಿ ಬಂದ ಬೇಟೆಗಾರರ ಮೇಲೆ ಬೀಳಲು ಸಿದ್ಧವಾದ ವ್ಯಾಘ್ರದಂತಿದ್ದ ಸಂತೋಜಿ ಘೋರ್ಪಡೆಯ ದರ್ಶನವಾಯಿತು.

"ಹಿಡಿಯಿರಿ ಆ ಸೈತಾನನನ್ನು"

—ಎಂದು ಕೂಗಿದ ಜಾರ್ಜ್.

ಆದರೆ, ಸಂತೋಜಿ ಅವನು ತನ್ನನ್ನು ಸೆರೆ ಹಿಡಿಯಲು ಅವಕಾಶ ಕೊಡದೆ, ಕೆರಳಿದ ಕೇಸರಿಯಂತೆ ಅವನ ಮೇಲೆ ಬಿದ್ದ.

ಏಕಾಂಗಿಯಾಗಿ ತಮ್ಮ ಮೇಲೆ ಬಿದ್ದ ಸಂತೋಜಿಯನ್ನು ಕಂಡ ಜಾನ್, ತನ್ನೊಂದಿಗಿದ್ದವರಿಗೆ—

"ಇವನು ನನ್ನ ಬೇಟೆ, ನೀವೆಲ್ಲರೂ ಹಿಂದೆ ಸರಿಯಿರಿ."

—ಎಂದು ಅಪ್ಪಣೆ ಮಾಡಿ, ತಾನು ಸಂತೋಜಿಯನ್ನು ಎದುರಿಸಿದ.

ತಾನು ಜೀವಂತನಾಗಿ ಉಳಿಯುವುದಿಲ್ಲವೆನ್ನುವುದನ್ನು ಅರಿತುಕೊಂಡ ಸಂತೋಜಿ ಘೋರ್ಪಡೆ, ಜೀವದ ಹಂಗು ಬಿಟ್ಟು ಕಾದತೊಡಗಿದ. ಅವನ ಭೀಷಣ ಸಮರೋತ್ಸಾಹ, ಖಡ್ಗ ಪ್ರಯೋಗದ ಚಾತುರ್ಯದ ಇದಿರು, ಹತ್ತಾರು ಬಾರಿ ಜಾನನೂ ಹಿಮ್ಮೆಟ್ಟಬೇಕಾಯಿತು; ತಾನೇ ಅವನ ಚಾತುರ್ಯವನ್ನು ಪ್ರಶಂಸಿಸುವಂತಾಯಿತು.

ಆದರೆ ಮಧ್ಯಾಹ್ನದಿಂದಲೂ ಒಂದೇ ಸಮನೆ ಹೋರಾಟದಲ್ಲಿ ನಿರತನಾಗಿ ಗಾಯಗೊಂಡಿದ್ದ ಸಂತೋಜಿಯಲ್ಲಿ ಬಹುಕಾಲ ಯುದ್ಧಮಾಡುವಷ್ಟು ಬಲ ಉಳಿದಿರಲಿಲ್ಲ.

ಎಂತಲೇ ಆದಷ್ಟು ಬೇಗ ತನ್ನ ಇದಿರಾಳಿಯನ್ನು ಕೊಲ್ಲಬೇಕೆಂಬ ಉದ್ದೇಶದಿಂದ, ಚಪಲತೆಯಿಂದ ಜಾನನ ಖಡ್ಗಾಘಾತವನ್ನು ನಿವಾರಿಸಿಕೊಂಡು, ಬಲವಾಗಿ ಅವನ ಮೇಲೆ ಖಡ್ಗ ಪ್ರಹಾರ ಮಾಡಿದ. ಆ ಏಟು ಜಾನನಿಗೆ ಬಿದ್ದಿದ್ದರೆ ಅವನ ಕಥೆ ಮುಗಿಯುತ್ತಿತ್ತು. ಆದರೆ, ಖಡ್ಗವನ್ನು ಬೀಸಿದ ವೇಗವನ್ನೂ ಭರಿಸಲಾಗದ ಸಂತೋಜಿಯ ಮೈ ಮುಗ್ಗರಿಸಿ, ಜಾನನ ಖಡ್ಗ ಅವನ ಹೃದಯವನ್ನು ಪ್ರವೇಶಿಸಿ, ನೆತ್ತರುಗಾರುತ್ತಾ ಸಂತೋಜಿ ಘೋರ್ಪಡೆ ನೆಲಕ್ಕುರುಳಿದ.

ಆ ಪತನದೊಂದಿಗೆ ಜಾನನ ಪ್ರತಿಜ್ಞೆ ಪೂರೈಸಿತು.

ಆದರೆ ಅವನ ಹೃದಯಕ್ಕೆ ಮಾತ್ರ ಆ ತೃಪ್ತಿ ದೊರಕಲಿಲ್ಲ.

* * * *

ಸಂತೋಜಿಯ ವಧೆಯೊಂದಿಗೆ ಅಂದಿನ ಯುದ್ಧಪ್ರಕರಣ ಮುಕ್ತಾಯವಾದಂತಾಯಿತು.

ದುರ್ಗದ ಸೇನೆ ಮರಾಟರನ್ನು ಸಂಪೂರ್ಣವಾಗಿ ಮುರಿದು, ಉಳಿದವರನ್ನು ಸೆರೆಯಾಳುಗಳನ್ನಾಗಿ ಹಿಡಿದು, ಅನಾಥವಾಗಿದ್ದ ಖಾಸಿಂಖಾನನ ಭಂಡಾರವನ್ನು ತನ್ನ ವಶಪಡಿಸಿಕೊಂಡಿತು.

ದೊಡ್ಡೇರಿಯಲ್ಲಿ ಸಂತೋಜಿ ಘೋರ್ಪಡೆಯ ಪಡೆಗಳಿಗಾದ ಗತಿಯೇ, ಅವನಿಗೆ ನೆರವು ನೀಡಲೆಂದು ಬಂದ ನಿಂಬಾಳ್ಕರನ ಸೇನೆಗೂ ಒದಗಿತು – ಅವರ ಬರುವನ್ನೇ ಕಾದ ದುರ್ಗದ ಸೇನೆ, ಚಳ್ಳಕೆರೆಯ ಬಳಿ ಅದನ್ನು ಎದುರಿಸಿದಾಗ.

ಸೀರ್ಯದವರ ಪಾಳಯದ ಮೇಲೆ ದಾಳಿ ಮಾಡಲು ನಿಯೋಜಿತನಾದ ನಿಂಬಾಳ್ಕರ್, ಸಂತೋಜಿ ಘೋರ್ಪಡೆಯ ಸೂಚನೆಯಂತೆ ಅವನ ನೆರವಿಗೆ ಐದು ನೂರು ಜನ ಸೈನಿಕರನ್ನು ಕಳುಹಿಸಿದ ನಿಂಬಾಳ್ಕರ್, ತಾನೂ ತನ್ನ ಪಡೆಯೊಂದಿಗೆ, ಆದಷ್ಟು ಬೇಗ ಅಲ್ಲಿಗೆ ಹೋಗಲು ನಿರ್ಧರಿಸಿ, ಇರುಳುಕಾಳಗವನ್ನು ನಿರೀಕ್ಷಿಸುತ್ತಿದ್ದ ಮೊಗಲರ ಪಡೆಯ ಮೇಲೆ, ನಡು ಹಗಲಿನಲ್ಲೇ ದಾಳಿ ಮಾಡಿದ.

ನಿಂಬಾಳ್ಕರನ ಸುಮಾರು ಹತ್ತು ಸಹಸ್ರ ಅಶ್ವಾರೋಹಿ ಪಡೆಗಳ ಪ್ರಬಲ ಆಘಾತವನ್ನು, ಸೀರ್ಯದವರ ಸೇನೆ ಆದಷ್ಟು ಪ್ರತಿಭಟಿಸಿತು.

ಸರಿಸುಮಾರು ಸಮಾನಬಲವಾದ ಸೇನೆಗಳೆರಡಕ್ಕೂ ನಿಕರವಾದ ಕಾಳಗ ಕೈಗಟ್ಟಿತು.

ಬೇಕಾದದ್ದಾಗಲಿ, ಈ ಸೇನೆ ದೊಡ್ಡೇರಿಯ ದಾರಿಯಲ್ಲಿ ಮುಂದುವರಿಯಲು ಬಿಡಬಾರದೆಂಬ ಸಂಕಲ್ಪದಿಂದ ಸೀರ್ಯದವರ ಸೇನೆಗಳೂ, ಆದಷ್ಟು ಬೇಗ ಅವರ ಪ್ರತಿಭಟನೆಯನ್ನು ಮುರಿದು, ಸಂತೋಜಿಯ ನೆರವಿಗೆ ಹೋಗಬೇಕೆಂಬ ದೃಢನಿರ್ಧಾರದಿಂದ ನಿಂಬಾಳ್ಕರನ ಸೇನೆಯೂ ಹೋರಾಡಿದವು. ಒಂದೇ ಸಮನೆ ಸಂಜೆಯವರೆಗೂ ಹೋರಾಟ ನಡೆಯಿತು.

ಹೆಜ್ಜೆಗೊಬ್ಬ ಸೈನಿಕನ ಬಲಿಕೊಟ್ಟು, ಹೆಜ್ಜೆಗೊಬ್ಬನ ಬಲಿ ತೆಗೆದುಕೊಂಡು, ಸೀರ್ಯದ ಸೇನೆ ಮರಾಟರಿಗೆ ಸೋತು, ಅಳಿದುಳಿದ ಬಲ ಎಲ್ಲ ಆಸೆಯನ್ನು ಬಿಟ್ಟು, ದಿಕ್ಕಾಪಾಲಾಗಿ ಚೆದುರಿತು.

ಸೀರ್ಯದವರ ಪ್ರಬಲ ಪಡೆಗಳನ್ನು ಸೋಲಿಸಿದ ಉತ್ಸಾಹದಿಂದ ಅಲ್ಲಿ ದೊರಕಿದ ಲೂಟಿಯನ್ನು ಹೊತ್ತು ನಿಂಬಾಳ್ಕರನ ಸೇನೆ ದೊಡ್ಡೇರಿಯತ್ತ ನಡೆಯಿತು.

ಆದರೆ, ಆ ವೇಳೆಗೆ ಸಂತೋಜಿಯ ರಕ್ಷಣೆಗೆಂದು ಹೊರಟ ಐನೂರು ಜನರ ಪಡೆಯನ್ನು, ಬಹು ಸುಲಭವಾಗಿ ಕಬಳಿಸಿದ ದುರ್ಗದ ಸೇನೆ, ಇರುಳು ಗತ್ತಲೆಯಲ್ಲಿ, ಯಾವ ದಾಳಿಯ ಭಯವೂ ಇಲ್ಲದೆ, ಮೈಮರೆತು ಮುಂದು ವರಿಯುತ್ತಿದ್ದ ನಿಂಬಾಳ್ಕರನ ದುರ್ಬಲಗೊಂಡ ಸೇನೆಯ ಮೇಲೆ ಹದ್ದಿನಂತೆ ಎರಗಿತು.

ಒಂದೆರಡು ಗಂಟೆಗಳ ಕಾಲ ದುರ್ಗದವರನ್ನು ಎದುರಿಸಲು ಪ್ರಯತ್ನ ಮಾಡಿದ ನಿಂಬಾಳ್ಕರ್, ಕೊನೆಗೆ ಸೋತು ಶರಣಾಗತನಾದ.

ಅವನಿಂದ ಸೀರ್ಯದವರಿಗಾದ ಪರಾಜಯದ ವಾರ್ತೆಯನ್ನು ಕೇಳಿದ ಕುಡುತನಿಯ ವೆಂಕಣ್ಣ, ಸೀರ್ಯದವರಿಗೆ ನೆರವು ನೀಡಲಾಗಲಿಲ್ಲವಲ್ಲ ಎಂದ ಪರಿತಾಪ ಪಟ್ಟರೂ, ಅದು ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು ಎಂದು ಸಮಾಧಾನ ಹಚ್ಚಿಕೊಂಡು, ದೊಡ್ಡೇರಿಯ ಕಡೆಗೆ ಹೋದ ದುರ್ಗದ ಪಡೆಗ ಳಿಂದ ಸುದ್ದಿ ಬರುವುದನ್ನೇ ಕಾಯುತ್ತಾ ಕುಳಿತ.

ಮಧ್ಯರಾತ್ರಿಯ ವೇಳೆಗೆ, ದೊಡ್ಡೇರಿಗೆ ತೆರಳಿದ ಪಡೆಗಳೂ, ಸಂತೋ ಜಿಯ ವಧೆಯ ಸಂತಸದ ವಾರ್ತೆಯನ್ನು ಹೊತ್ತು, ಖಾಸಿಂಖಾನನ ಭಂಡಾರ ವನ್ನೂ ತೆಗೆದುಕೊಂಡು ಚಳ್ಳಕೆರೆಗೆ ಹಿಂದಿರುಗಿದವು.

ವಿಜಯೀ ಪಡೆಗಳೆರಡೂ ಆ ರಾತ್ರಿ ಚಳ್ಳಕೆರೆಯಲ್ಲಿ ವಿಶ್ರಮಿಸಿಕೊಂಡು, ಮರು ಹಗಲು ದುರ್ಗದತ್ತ ಪ್ರಯಾಣ ಮಾಡಿದವು.

ಸಾವಿರಾರು ಕುದುರೆಗಳು, ಸಾವಿರಾರು ಸೆರೆಯಾಳುಗಳು, ಅಪಾರ ಧನ, ಕನಕ ಭಂಡಾರದೊಂದಿಗೆ ದುರ್ಗದ ಸೇನೆ ಹಿಂದಿರುಗಿದುದನ್ನು ಕಂಡು ನಾಯಕರಿಗೆ ಅಮಿತಾನಂದವಾಯಿತು.

ಯುದ್ಧದಲ್ಲಿ ಗೆದ್ದು ಬಂದ ದಳಪತಿಗಳೆಲ್ಲರಿಗೂ ಉಡುಗೊರೆ, ಜಮಾನು ಮಾನ್ಯಗಳನ್ನು ಕೊಟ್ಟು ಸತ್ಕರಿಸಿದರು.

ಆದರೆ ಜರ್ಾ ಡ್ಯುಪೋರೋ ಮಾತ್ರ ಯಾವ ಬಗೆಯ ಉಡುಗೊರೆ ಯನ್ನೂ ಸ್ವೀಕರಿಸಲು ಒಪ್ಪಲಿಲ್ಲ.

ನಾಯಕರು ಹೆಚ್ಚು ಬಲವಂತ ಮಾಡಿದಾಗ—

'ನನಗೆ ಬೇಕಾದ ಉಡುಗೊರೆ, ಈ ಮೊದಲೇ ನನಗೆ ದೊರೆತಿದೆ ಜಹಾಪನಾ'

—ಎಂದು ಹೇಳಿದ.

ಅವನ ಮಾತಿನ ಅರ್ಥವೇನೆಂಬುದನ್ನು ತಿಳಿದುಕೊಂಡ ನಾಯಕರು—

'ಆದರೆ ಅದು ನಾವು ಕೊಟ್ಟ ಉಡುಗೊರೆಯಲ್ಲ. ನೀವಾಗಿಯೇ ಪಡೆದುದು. ಹಾಗಿರುವಾಗ ಅದು ನಾವು ಕೊಟ್ಟ ಉಡುಗೊರೆ ಹೇಗಾಗುತ್ತದೆ ?'

—ಎಂದು ಪ್ರತಿವಾದ ಹೂಡಿದರು ನಾಯಕರು.

'ಅದು ನಾನು ಬೇಡಿದುದೂ ಅಲ್ಲ, ನಾನು ಪಡೆದುದೂ ಅಲ್ಲ. ಆ ಅನರ್ಘ್ಯ ಉಡುಗೊರೆಯನ್ನು ಬೇಡುವ ಪಡೆಯುವ ಎರಡೂ ಯೋಗ್ಯತೆ ನನಗಿಲ್ಲ ಜಹಾಪನಾ ; ಅದು ದೇವರು ಕೊಟ್ಟ ವರ.'

'ಹಾಗೆಂದ ಮೇಲೆ ಅದರಲ್ಲಿ ನಮಗೆ ಬಂದ ಭಾಗ್ಯವೇನು ? ಇಂದಾದ ಗೆಲುವೂ ಕೇವಲ ತಮ್ಮ ಪೌರುಷದಿಂದಲೇ ಸಾಧಿತವಾದುದಲ್ಲ. ಕಾರಣಾ ಕಾರಣಗಳಿಂದ ನಮಗೆ ಲಭ್ಯವಾಯಿತು. ಈಗ ನಿಮಗೆ ನಾವು ಕೊಡುವ ಉಡುಗೊರೆಯೂ ನಮ್ಮದಲ್ಲವಾಯಿತು. ಹಾಗಾದರೆ ನಮ್ಮದಾಗಿ ಉಳಿದದ್ದೇನು ?'

'ನಿಮ್ಮದಾಗಿ ಉಳಿದಿರುವುದು, ಇಂಥ ಗೆಲುವನ್ನು ತಾನಾಗಿಯೇ ನಿಮ್ಮ ಮನೆಬಾಗಿಲಿಗೆ ತಂದೊಪ್ಪಿಸಿದ ದೈವಾನುಗ್ರಹ. ಮೆಹರಳನ್ನು ತಾನಾಗಿಯೇ ನೀಡಿ, ನನ್ನನ್ನು ಭಾಗ್ಯವಂತನನ್ನಾಗಿ ಮಾಡಿದ ದೈವವೇ, ಇಂದು ನಿಮಗೆ ಈ ವಿಜಯವನ್ನು ಕರುಣಿಸಿದೆ. ಮನುಷ್ಯ ಪ್ರಯತ್ನದಿಂದ ದೊರೆತ ಗೆಲುವಿಗಿಂತಲೂ ದೈವಾನುಗ್ರಹದಿಂದ ದೊರೆತ ವಿಜಯೋತ್ಸವ ಹಿರಿದಾದದ್ದು ; ಹೆಚ್ಚು ಶಾಶ್ವತವಾದದ್ದು. ಅಲ್ಲವೇ – ಜಹಾಪನಾ ?'

—ಜಾರ್ಜ್ ಕೇಳಿದ.

ಅವನ ಮಾತು ನಿಜವೆಂದು ಸಮ್ಮತಿಯನ್ನು ಸೂಚಿಸುವಂತೆ ನಾಯಕರು ತಲೆಯಲ್ಲಾಡಿಸಿದರು.

'ಆಯಿತೇ, ದೈವ ನಿಮಗೆ ಕೊಟ್ಟ ಗೆಲುವನ್ನು ನಿಮಗೆ ಒಪ್ಪಿಸಿದ್ದೇನೆ ಜಹಾಪನಾ, ನನಗೆ ನೀಡಿದುದನ್ನು ನೀವೇ ಕೈಯಾರ ನನಗೆ ಅನುಗ್ರಹಿಸಿ'

ಅವನ ಮಾತಿಗೆ ನಾಯಕರು ಏನೂ ಉತ್ತರ ಕೊಡದೆ, ಅರಮನೆಯ ಅಂತಃಪುರದತ್ತ ನೋಡಿದರು.

ಆ ನೋಟದ ಇಂಗಿತವನ್ನರಿತ ಜಾರ್ಜ್, ಮುಂದಿನ ಮಾತಿಗೆ ಕಾಯದೆ ಅತ್ತ ಕಡೆ ನಡೆದ.

ಹಾಗೆ ಹೋದ ಜಾನನ ನಡಿಗೆಯಲ್ಲಿದ್ದ ಉತ್ಸಾಹವನ್ನು ಗಮನಿಸಿದ ನಾಯಕರು, ತಮಗೆ ತಾವೇ ಹೇಳಿಕೊಂಡರು—

'ಮರಾಟರು ಸೋತದ್ದು ದೊಡ್ಡದಲ್ಲ; ಈತನ ಹೃದಯಕ್ಕೆ ಲಗ್ಗೆ ಹಾಕಿದ ನಿರಾಶೆಯ ಕತ್ತಲು ಸೋತದ್ದು ಹಿರಿದಾದ ವಿಜಯೋತ್ಸವ.'



ತ. ರಾ. ಸು

ಅವರ

ನಮ್ಮ ಪ್ರಕಟನೆಗಳು

| | |
|---|---|
| ಹೊಸ ಹಗಲು | 1.50 |
| ವಿಜಯೋತ್ಸವ I | 1.50 |
| ವಿಜಯೋತ್ಸವ II | 1.75 |
| ತೊಟ್ಟಿಲು ತೂಗಿತು | 0.75 |
| ರೂಪಸಿ | 1.00 |
| ಜ್ವಾಲಾ | 0.75 |

★

ಅಚ್ಚಿನಲ್ಲಿ

ಚದುರಂಗದ ಮನೆ

ಮುಂಜಾವಿನಿಂದ ಮುಂಜಾವು

ಜೀತದ ಜೀವ

ಅಶೋಕ ಸಾಹಿತ್ಯ — ಬೆಂಗಳೂರು

★

—: ಮಾರಾಟದ ಪೂರ್ಣ ಹಕ್ಕುದಾರರು :—

ಸ್ಟ್ಯಾಟಲೆ […],
ಅವೆನ್ಯೂ ರೋ[…]ರು–2